# PACKAGE TOURS - 2019

Hotel Room Accom. & South Indian Veg. Food

## Mini Andhra



05 Days

Feb 13
Mar 13

Mantralaya, Srishaila, Mahanandi, Ahobilam (Nava Narasimha)

## Shaktipeetha Manali Special



18 Days

Sep 05
Oct 09

Wagah Border [Indo-Pak Border], Amritsar, Vaishnavi Devi, Chamunda, Kangra, Chintapurni, Jwalamukhi, Baijnath, Kullu-Manali, Vasista, Rohtang Pass [Optional], Naina Devi, Kufri, Shimla, Chandigarh, Kurukshetra, New Delhi

## Nepal Special



08 Days

Apr 09
May 25

Kathmandu, Manokamana, Pokhara, Jomsom, Mukthinath, Patan

## KAILASH & MANASA SAROVAR YATRA



11 Days

May 30
Jun 06, 11
July 04, 16
Aug 27 Sep 05

## Kolkata Darjeeling



16 Days

Apr 10

Bhubaneshwar, Puri, Konark, Chilka Lake, Kolkata, Siliguri, Gangtok, Chengu Lake, Harbhajan Singh Mandir, Darjeeling

## Amarnath Yatra



19 Days

July 01

Attari Border [Indo-Pak Border], Amritsar, Katra, Vaishnavi Devi, Baltal, Amarnath, Gulmarg, Srinagar, Kurukshetra, New Delhi

## Charodham Yatra

19 Days



May 06, 21
Jun 06
Sep 05, 16, 22
Oct 06, 09

Haridwar, Yamunotri, Gangotri, Uttarkashi, Kedarnath, Triyugi (Optional), Mana, Vyasa Guha, Ganesh Guha, Keshava Prayag, Badrinath, Rishikesh, New Delhi

## SRILANKA



07 Days

Apr 22



# Shri Hansaa Travels

Recognised by Department of Tourism, Govt. of Karnataka

: 640, 40th Cross, 8th Block, Jayanagar, Bangalore - 70
: hansaatravels@gmail.com : hansaatravels.com
080-26643276 / 26543891 / 9341215612 / 9341415612



# ವಿವೇಕಪ್ರಭ

ಮಾರ್ಚ್-2019 ಸಂಪುಟ 20 ಸಂಚಿಕೆ 03







## ವಿಶೇಷ ಲೇಖನ



## ಧಾರಾವಾಹಿ
















ವ್ಯವಸ್ಥಾಪಕ ಸಂಪಾದಕರು: ಸ್ವಾಮಿ ಆತ್ಮಜ್ಞಾನಂದ

ಸಂಪಾದಕರು: ಸ್ವಾಮಿ ಜ್ಞಾನಯೋಗಾನಂದ

ನೆರವು: ಆರ್. ಎಸ್. ಪೂರ್ಣಾನಂದ
ಡಾ. ಕೆ. ಎಲ್. ಪ್ರಸನ್ನಾಕ್ಷೀ,
ಡಾ. ಎಚ್. ಪಾಂಡುರಂಗ ವಿಠಲ

ಅಕ್ಷರ ಜೋಡಣೆ: ಶ್ರೀರಾಮಕೃಷ್ಣ ಆಶ್ರಮ, ಮೈಸೂರು

ಮುದ್ರಣ: ಮಯೂರ್ ಗ್ರಾಫಿಕ್ಸ್, ಬೆಂಗಳೂರು


### ಮುಖಪುಟ

ಮಣಿವೆ ನಿನ್ನ ಕಮಲದಡಿಗೆ..

### ಚಂದಾ ವಿವರ


ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ: $ 60
ಆಜೀವ (25ವರ್ಷ): $ 300
ಪೋಷಕರು : $ 600 ಅಥವಾ ಹೆಚ್ಚು.


### ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

- ಸ್ವಾಮಿ ವಿವೇಕಾನಂದ


ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.



E-mail: mysuru.vivekaprabha@rkmm.org
Website: www.vivekaprabha.net
ಫೋನ್ : 9481533505



# ಶ್ರೀರಾಮಕೃಷ್ಣರ ಭಜನೆ

ಅರೂಪ ಸಾಯರೆ ಲೀಲಾ ಲಹರಿ ಉಠಿಲೊ ಮೃದುಲ ಕರುಣಾಬಾಯ್
ಆದಿ ಅಂತಹೀನ ಅಖಂಡೇ ವಿಲೀನ, ಮಾಯಾಯ್ ಧೊರಿಲೇ ಮಾನವಕಾಯ್ ॥

ಮನೇರ ಓಪಾರೇ ಕೊಥಾ ಕೋನೊ ದೇಶ್, ಶಶಿ ತಪನೇರ ನಾಹಿ ಪರವೇಶ್
ತವ ಹಾಶಿರಾಶಿ ಕಿರಣ ವರಶಿ ಉಜಲೇ ಸೆಥಾವೊ ಚಾರು ವಿಭಾಯ್ ॥

ಪ್ರೇಮೇರ್ ಏ ತನು ಅತನು ಗಂಜನ ಕಿ ಮಧುರ ವಿಭಾ ವಿಕಾಸೇ ನಯನ
ಜೇ ಹೇರೇ ಶೇ ಜನ ತನು-ಪ್ರಾಣ-ಮನ ಚರಣೇ ಅರ್ಪಣ ಕೊರಿತೇ ಚಾಯ್ ॥

ತೋಮಾರಿ ಆಶಾಯ್ ಕೊತೊ ಯುಗ ಗತೊ, ಸಂಶಯ ಜತೊ ಆಜಿ ತಿರೋಹಿತೊ
ಜಾ ಆಛೆ ಆಮಾರ್ ಲಹೋ ಉಪಹಾರ್ ಸೊಂಪಿನು ಜೀವನ ತವ ಸೇವಾಯ್ ॥

— ಸ್ವಾಮಿ ಪ್ರೇಮೇಶಾನಂದ

(ನಿರಾಕಾರ ಸಮುದ್ರದಲ್ಲಿ ಲೀಲೆಯ ಮಾಧುರ್ಯದಿಂದ ಕರುಣೆಯ ತಂಗಾಳಿ ಬೀಸಿ, ಅಲೆಗಳು ಎದ್ದುಬಂದಿವೆ. ಆದಿ-ಅಂತ್ಯಗಳಿಲ್ಲದ ಅಖಂಡದಲ್ಲಿ ವಿಲೀನವಾದ ನೀನು, ನಿನ್ನದೇ ಆದ ಮಾಯೆಯನ್ನಾಶ್ರಯಿಸಿ ಮಾನವ ದೇಹವನ್ನು ಧರಿಸಿದೆ.

ಮನಸ್ಸಿಗೆ ನಿಲುಕದ ಅಜ್ಞಾತವಾದ ನೆಲೆಗಳಲ್ಲಿ , ಸೂರ್ಯ ನಾಗಲಿ ಚಂದ್ರನಾಗಲಿ ಪ್ರವೇಶಿಸಲಾಗದ ನೆಲೆಯಲ್ಲಿ ನಿನ್ನ ಅನಂತ ನಗುವಿನ ಕಿರಣಗಳು ಚೆಲ್ಲಿ, ಅಪೂರ್ವ ಸೌಂದರ್ಯದ ಬೆಳಕನ್ನು ಬೀರುತ್ತಿವೆ.

ದಿವ್ಯಪ್ರೇಮವೇ ಮೂರ್ತಿಗೊಂಡ ನಿನ್ನ ಶರೀರವು ಮನ್ಮಥ ನನ್ನೇ ನಾಚಿಸುವಂಥದು. ನಿನ್ನ ಕಣ್ಣುಗಳಿಂದ ಅದೆಂಥ ಮಧುರ ವಾದ ಬೆಳಕು ಹೊರಹೊಮ್ಮುತ್ತಿದೆ! ನಿನ್ನನ್ನು ಒಂದು ಬಾರಿ ನೋಡಿದವರು ಕೂಡ ತಮ್ಮ ದೇಹ, ಮನಸ್ಸು, ಪ್ರಾಣಗಳನ್ನು ನಿನ್ನ ಚರಣಗಳಲ್ಲಿ ಅರ್ಪಿಸಲು ಬಯಸುವರು.

ನಿನ್ನನ್ನೇ ಬಯಸುತ್ತಾ ಎಷ್ಟೋ ಯುಗಗಳೇ ಕಳೆದು ಹೋದವು. ಆದರೆ ಇಂದು ಎಲ್ಲ ಸಂಶಯಗಳೂ ಮಾಯವಾದವು. ನನ್ನದೆಲ್ಲವನ್ನೂ ನೀನು ಕಾಣಿಕೆಯಾಗಿ ಸ್ವೀಕರಿಸು. ನನ್ನ ಜೀವನ ವನ್ನೇ ನಿನ್ನ ಸೇವೆಗಾಗಿ ನಾನು ಅರ್ಪಿಸುತ್ತೇನೆ.)



## ಶಿವ ಸೂಕ್ತಿಗಳು

ಶಬ್ದಾರ್ಥಗಳಂತೆ ಯಾವಾಗಲೂ ಒಂದಾಗಿರುವ ಜಗತ್ತಿನ ಮಾತಾಪಿತೃಗಳಾದ ಪಾರ್ವತೀಪರಮೇಶ್ವರರನ್ನು ಶಬ್ದಾರ್ಥ ಸ್ಫೂರ್ತಿಗಾಗಿ ವಂದಿಸುತ್ತೇನೆ.

— ಕಾಳಿದಾಸ *(ರಘುವಂಶ ಮಹಾಕಾವ್ಯ)*

ತಿಮಿರಮಾಲೆ ಯಾರಲ್ಲಿ ಜಾರಿಹೋಗಿರುವುದೋ, ಶುಭ್ರ ತೇಜಃಪ್ರಕಾಶನಾಗಿ ಧವಳಕಮಲದಂತೆ ಯಾರು ಶೋಭಿಸುತ್ತಿರು ವನೋ, ಯಾರ ಅಟ್ಟಹಾಸವು ಜ್ಞಾನವನ್ನು ಪ್ರಚೋದಿಸುವುದೋ, ಯಾರನ್ನು ನಿರಂತರ ಧ್ಯಾನದಿಂದ ತಮ್ಮ ಹೃದಯಾಂತರಾಳದಲ್ಲಿ ಜ್ಞಾನಿಗಳು ತಿಳಿದುಕೊಂಡಿರುವರೋ, ಅಂತಹ ಮಾನಸ ಸರೋ ವರದಲ್ಲಿ ವಿಹರಿಸುತ್ತಿರುವ ಪರಮಶಿವನೆಂಬ ರಾಜಹಂಸವು ಪ್ರಣತನಾದ ನನ್ನನ್ನು ರಕ್ಷಿಸಲಿ.

— ಸ್ವಾಮಿ ವಿವೇಕಾನಂದ *('ಶಿವಸ್ತೋತ್ರ'ದಿಂದ)*

ಈಶ್ವರನೆ, ನೀಲಾಚಲದಷ್ಟು ಮಸಿಯನ್ನೂ ಸಮುದ್ರವನ್ನೇ ಮಸಿಯ ಕುಡಿಕೆಯನ್ನೂ, ಕಲ್ಪವೃಕ್ಷದ ಕೊಂಬೆಯನ್ನೇ ಲೇಖನಿ ಯನ್ನೂ, ಭೂಮಿಯನ್ನೇ ಪತ್ರವನ್ನೂ ಮಾಡಿಕೊಂಡು ಸ್ವತಃ ವಾಗ್ದೇವಿಯೇ ಎಲ್ಲ ಕಾಲವೂ ಬರೆದರೂ ನಿನ್ನ ಗುಣಗಳ ಸೀಮೆ ಯನ್ನು ಮುಟ್ಟುವುದಿಲ್ಲ.

— ಪುಷ್ಪದಂತ *('ಶಿವಮಹಿಮ್ನಸ್ತೋತ್ರ'ದಿಂದ)*

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ;
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ!
ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ
ಕೂಡಲಸಂಗಮದೇವಯ್ಯ,
ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ!

— ಬಸವಣ್ಣ







# Ramakrishna Math (A Branch of Belur Math)

South Nada, Opp. Ashoka Petrol Pump, Haripad - 690514 Dist. Alleppey, Kerala.
Phone: 0479-2411700,0974 5325 834. Email: srkmathharipad@gmail.com,
viveka.vira@gmail.com Website: www.rkmathharipad.org

## ಶ್ರೀರಾಮಕೃಷ್ಣರ ಮಠದ ಪುನರ್ನಿರ್ಮಾಣಕ್ಕಾಗಿ ಒಂದು ಮನವಿ



ಎರಡು ಕೊಠಡಿಗಳಿರುವ ಹಳೇ ಗೋಡೌನ್ (ಸಾಧುಗಳು ಈಗ ಇಲ್ಲಿಯೇ ತಂಗಿದ್ದಾರೆ)



ಜೀರ್ಣಾವಸ್ಥೆಯಲ್ಲಿರುವ ಕಟ್ಟಡಗಳು




೧೯೧೨ರ ಶಂಕುಸ್ಥಾಪನೆ ಶಿಲಾಫಲಕ

ಪ್ರೀತಿಯ ಭಕ್ತರೆ, ಹಿತೈಷಿಗಳೆ ಮತ್ತು ಸ್ನೇಹಿತರೆ,

ಕೇರಳದ ಹರಿಪಾಡ್‌ನಲ್ಲಿರುವ ರಾಮಕೃಷ್ಣ ಮಠವನ್ನು ೧೯೧೨ರಲ್ಲಿ ಸ್ಥಾಪಿಸಲಾಯಿತು. ಶ್ರೀರಾಮಕೃಷ್ಣರ ನೇರಶಿಷ್ಯರೂ, ಅವರ ಮಾನಸಪುತ್ರರೂ ಆಗಿದ್ದ ಪರಮಪೂಜ್ಯ ಸ್ವಾಮಿ ಬ್ರಹ್ಮಾನಂದಜಿಯವರು ನೆಲೆಸಿದ್ದ ಪವಿತ್ರಸ್ಥಾನವಿದು. ಹಲವು ವರ್ಷಗಳ ಕಾಲ ಬಳಸದೆ ಉಳಿದದ್ದರಿಂದ ಆಶ್ರಮದ ಕಟ್ಟಡಗಳು ಈಗ ಜೀರ್ಣಾವಸ್ಥೆಯಲ್ಲಿವೆ. ಮತ್ತೆ ಇದರ ಪುನರ್‌ನಿರ್ಮಾಣ ಕಾರ್ಯವನ್ನು ನಾವು ಕೈಗೊಂಡಿದ್ದು, ಮೊದಲ ಹಂತದಲ್ಲಿ ಶ್ರೀರಾಮಕೃಷ್ಣ ವಿಶ್ವಭಾವೈಕ್ಯ ಮಂದಿರ, ಸಮಾಜ ಕಲ್ಯಾಣ ಚಟುವಟಿಕೆಗಳಿಗಾಗಿ ಕೊಠಡಿಗಳು, ಸಂನ್ಯಾಸಿಗಳು ಮತ್ತು ಅತಿಥಿಗಳಿಗೆ ನಿವಾಸದ ಕೊಠಡಿಗಳು, ಕಛೇರಿ ಕಟ್ಟಡ, ಗ್ರಂಥಾಲಯ ಮತ್ತು ಉಚಿತ ವಾಚನಾಲಯ – ಇವುಗಳನ್ನು ನಿರ್ಮಿಸುವ ಯೋಜನೆ ಹಾಕಿಕೊಂಡಿದ್ದೇವೆ. ಈ ಎಲ್ಲ ಕಟ್ಟಡಗಳನ್ನೂ ಸಂಪೂರ್ಣವಾಗಿ ನವೀಕರಿಸಬೇಕಾಗಿದೆ.

**ಈ ಯೋಜನೆಗೆ ಸುಮಾರು 9 ಕೋಟಿ ರೂಪಾಯಿ ವೆಚ್ಚ ತಗಲಬಹುದಾಗಿದೆ.**

ಉದಾರ ಹೃದಯಿಗಳಾದ ಎಲ್ಲ ದಾನಿಗಳು, ಅದರಲ್ಲೂ ಶ್ರೀರಾಮಕೃಷ್ಣರ ಭಕ್ತರು ಮುಂದೆ ಬಂದು ಶ್ರೀರಾಮಕೃಷ್ಣರ ಈ ಧಾಮವನ್ನು ನಿರ್ಮಿಸಲು ಮತ್ತು ಆ ಮೂಲಕ ಮಾನವ ಜನಾಂಗದ ಸೇವೆಯನ್ನು ಸಲ್ಲಿಸಲು ದೇಣಿಗೆಗಳನ್ನು ನೀಡಬೇಕೆಂದು ತಮ್ಮಲ್ಲಿ ಮನವಿ ಮಾಡುತ್ತೇವೆ. ಈ ಸೇವಾಯಜ್ಞದಲ್ಲಿ ಪಾಲ್ಗೊಳ್ಳುವ ಪ್ರತಿಯೊಬ್ಬರೂ ಭಗವಾನ್ ಶ್ರೀರಾಮಕೃಷ್ಣ, ಶ್ರೀಮಾತೆ ಶಾರದಾದೇವಿ ಮತ್ತು ಸ್ವಾಮಿ ವಿವೇಕಾನಂದರ ಆಶೀರ್ವಾದಗಳಿಗೆ ಖಂಡಿತವಾಗಿಯೂ ಪಾತ್ರರಾಗುತ್ತಾರೆ ಎಂಬುದು ನಮ್ಮ ನಂಬಿಕೆ.

ಇತಿ ಭಗವತ್ಸೇವೆಯಲ್ಲಿ ತಮ್ಮ,
ಸ್ವಾಮಿ ವೀರಭದ್ರಾನಂದ, ಅಧ್ಯಕ್ಷರು

**ದೇಣಿಗೆಗಳನ್ನು ಕಳುಹಿಸುವುದಕ್ಕೆ ಅಗತ್ಯವಾದ ವಿವರಗಳು**

1) ದೇಣಿಗೆ – ಭಾರತದಲ್ಲಿ : 1) Go to-www.onlinesbi.com > Then Select- SBI Collect> State- Kerala >Institutions -Charitable Institutions >Ramakrishna Math Haripad.

2) ಚೆಕ್, ಡಿ.ಡಿ.ಗಳನ್ನು "Ramakrishna Math, Haripad" ಈ ಹೆಸರಿಗೆ ಕಳುಹಿಸಿ ಕೊಡಬೇಕು.

3) NEFT Transfer : AC Number : 30642551603, : State Bank of India. Haripad.
RTGS/NEFT/IFSC code : SBIN0010596.

(ಒಂದು ವೇಳೆ NEFT ವರ್ಗಾವಣೆ ಮಾಡುವುದಾಗಿದ್ದರೆ, ದಯವಿಟ್ಟು ಇ-ಮೇಲ್ ಮೂಲಕ ನಿಮ್ಮ ಹೆಸರು, ಕಳುಹಿಸಿದ ಮೊತ್ತ, ಅಂಚೆ ವಿಳಾಸ, PAN ಸಂಖ್ಯೆ, ಫೋನ್ ಸಂಖ್ಯೆ ಹಾಗೂ ವರ್ಗಾವಣೆಯ ವಿವರಗಳನ್ನು ಈ ವಿಳಾಸಕ್ಕೆ ತಿಳಿಸಬೇಕು: srkmathharipad@gamil.com)

★ Donations from Foreign countries: Kindly draw a Cheque/ Draft in favour of "Ramakrishna Math" and send it to the General Secretary, Ramakrishna Math, Belur Math, Dt. Howrah (West Bengal), Pin -711 202, India. In the covering letter mention that it is a donation for Haripad Centre building fund. And inform all the details of the donation to e-mail: srkmathharipad@ gmail.com, viveka.vira@gmail.com

**ರಾಮಕೃಷ್ಣ ಮಠಕ್ಕೆ ನೀಡುವ ದೇಣಿಗೆಗಳಿಗೆ ಸೆಕ್ಷನ್ 80G ಪ್ರಕಾರ, ಆದಾಯ ತೆರಿಗೆ ವಿನಾಯಿತಿ ಅನ್ವಯವಾಗುತ್ತದೆ.**



## ಶ್ರೀರಾಮಕೃಷ್ಣ ಶಾರದಾಶ್ರಮ, ಪೊನ್ನಂಪೇಟೆ – 571216, ಕೊಡಗು ಜಿಲ್ಲೆ

Phone : 08274-298244, 249555; Email: srksevaponnampet@gmail.com
Website: www.rkmponnampet.org

# ವಸಂತ ವಿಹಾರ

**(ಬೇಸಿಗೆ ರಜದಲ್ಲಿ ಗಂಡುಮಕ್ಕಳಿಗಾಗಿ ಮೌಲ್ಯವರ್ಧನಾ ಕಾರ್ಯಾಗಾರ)**

**21.4.2019 ರಿಂದ 28.4.2019**

ಪ್ರಿಯ ಸ್ನೇಹಿತರೇ,

ಪೊನ್ನಂಪೇಟೆಯ ಆಶ್ರಮದ ಆವರಣದಲ್ಲಿ ಭಗವಾನ್ ಶ್ರೀರಾಮಕೃಷ್ಣರ ಭವ್ಯವಾದ ವಿಶ್ವಭಾವೈಕ್ಯ ಮಂದಿರವನ್ನು ನಿರ್ಮಿಸಲಾಗಿದೆ. ಈ ದೇವಾಲಯವನ್ನು ಕೇಂದ್ರಬಿಂದುವಾಗಿಟ್ಟುಕೊಂಡು, ಹಲವಾರು ಸೇವಾಕಾರ್ಯಗಳನ್ನು ಆಶ್ರಮವು ನಡೆಸುತ್ತಿದೆ. 11 ರಿಂದ 15 ವರ್ಷ ವಯಸ್ಸಿನ ಶಾಲಾ ಮಕ್ಕಳಿಗಾಗಿ **'ವಸಂತ ವಿಹಾರ'** ಎಂಬ ಬೇಸಿಗೆ ಶಿಬಿರವನ್ನು **21.4.2019 ರಿಂದ 28.4.2019** ರ ವರೆಗೆ ನಡೆಸಲಿದ್ದೇವೆ. ಈ ಶಿಬಿರವು ಬೆಳಗಿನಿಂದ ಸಂಜೆಯವರೆಗೆ ಇರುತ್ತದೆ. ಪರಸ್ಥಳಗಳಿಂದ ಬರುವ ಮಕ್ಕಳಿಗೆ ಆಶ್ರಮದಲ್ಲಿ ಮತ್ತು ಹತ್ತಿರದ ಕೆಲವು ಆವಾಸಿ ಶಾಲೆಗಳಲ್ಲಿ ತಂಗುವ ವ್ಯವಸ್ಥೆಯನ್ನೂ ಮಾಡಲಿದ್ದೇವೆ. ಮಕ್ಕಳಿಗೆ ಯೋಗಾಸನ, ಪ್ರಾಣಾಯಾಮ, ಏಕಾಗ್ರತೆಯನ್ನು ಬೆಳೆಸಿಕೊಳ್ಳುವ ವಿಧಾನ, ವ್ಯಕ್ತಿತ್ವ ವಿಕಾಸ, ಮೌಲ್ಯಶಿಕ್ಷಣ, ಪ್ರಾರ್ಥನೆ ಮುಂತಾದವುಗಳನ್ನು ಹೇಳಿಕೊಡಲಾಗುವುದು. ನಿಮ್ಮ ಮಕ್ಕಳನ್ನು ಈ ಕಾರ್ಯಕ್ರಮಕ್ಕೆ ಕಳುಹಿಸಿಕೊಡುವುದರಿಂದ ನಮ್ಮ ಸನಾತನ ಧರ್ಮದ ಮೌಲ್ಯಗಳ ಬಗ್ಗೆ ಅವರಿಗೆ ಅರಿವು ಮೂಡುತ್ತದೆ. ಸ್ವಾಮಿ ವಿವೇಕಾನಂದರ ಆಶಯದಂತೆ ಅವರನ್ನು ಯೋಗ್ಯ, ಉಪಯುಕ್ತ ಪ್ರಜೆಗಳನ್ನಾಗಿ ರೂಪಿಸುವುದೇ ನಮ್ಮ ಉದ್ದೇಶ.

**ಶಿಬಿರ ಶುಲ್ಕ :** ವಸತಿ ರಹಿತ : ರೂ.400 /- ; ವಸತಿ ಸಹಿತ : ರೂ.800 /- ನೋಂದಾಯಿಸಿಕೊಳ್ಳಲು ಕೊನೆಯ ದಿನಾಂಕ : **15.4.2019**

**1) 11ರಿಂದ 15 ವರ್ಷ ವಯಸ್ಸಿನ ಗಂಡುಮಕ್ಕಳಿಗೆ ಮಾತ್ರ. 2) ಖಾಲಿ ಕಾಗದದಲ್ಲಿ ವಿದ್ಯಾರ್ಥಿಯ ಹೆಸರು, ವಯಸ್ಸು, ತರಗತಿ, ತಂದೆತಾಯಿಗಳ ಹೆಸರು, ವಿಳಾಸ, ಲ್ಯಾಂಡ್ ಫೋನ್ ಮತ್ತು ಮೊಬೈಲ್ ಫೋನ್ ನಂಬರುಗಳನ್ನು ಬರೆದು, ಡಿ.ಡಿ. ಮೂಲಕ ಹಣವನ್ನು ಆಶ್ರಮಕ್ಕೆ ಕಳುಹಿಸಿರಿ.**
RTGSಗಾಗಿ ಬ್ಯಾಂಕ್ ವಿವರಗಳು: Sri Ramakrishna Sharadashrama, Ponnampet. SB. A/c.no.520101041841472. IFSC Code : CORP0000032 (ಹಾಗೂ, ಪತ್ರ ಅಥವಾ ಇಮೇಲ್ ಮೂಲಕ ವಿವರಗಳನ್ನು ತಿಳಿಸಿರಿ.)

ಪ್ರೀತಿ ಮತ್ತು ಶುಭಾಶಯಗಳೊಂದಿಗೆ,

**ಭಗವತ್ಸೇವೆಯಲ್ಲಿ ತಮ್ಮವ**
**ಸ್ವಾಮಿ ಬೋಧಸ್ವರೂಪಾನಂದ**
ಅಧ್ಯಕ್ಷರು

ಸಂಪಾದಕೀಯ

# ಸಂನ್ಯಾಸ ಮತ್ತು ಗೃಹಸ್ಥ ಜೀವನ

ಪ್ರಪಂಚದ ಪ್ರಮುಖ ಧರ್ಮಗಳೆಲ್ಲ ಸಂನ್ಯಾಸ ಜೀವನಕ್ಕೆ ಮಹತ್ವ ಕೊಟ್ಟಿರುವುದನ್ನು ನಾವು ಕಾಣುತ್ತೇವೆ. ಹಿಂದೂ, ಬೌದ್ಧ, ಜೈನ, ಕ್ರೈಸ್ತ ಧರ್ಮಗಳಲ್ಲಿ ಸಂನ್ಯಾಸ ಜೀವನವೆಂದರೆ ಜೀವನ ಪರ್ಯಂತ ಬ್ರಹ್ಮಚರ್ಯ ಜೀವನ ನಡೆಸುತ್ತ, ಭಗವಂತನ ಸಾಕ್ಷಾತ್ಕಾರಕ್ಕಾಗಿ ತನ್ನ ಇಡೀ ಬದುಕನ್ನೇ ಸಮರ್ಪಿಸುವ ತ್ಯಾಗ ಜೀವನವನ್ನು ಅತ್ಯುತ್ಕೃಷ್ಟ ಆದರ್ಶದ ಬದುಕು ಎನ್ನಲಾಗಿದೆ. ಇತರ ಧರ್ಮಗಳಲ್ಲೂ ತ್ಯಾಗಜೀವನಕ್ಕೆ ಮಹತ್ವವಿದೆ.

## ಸಂನ್ಯಾಸ ಜೀವನದ ಆದರ್ಶ

ಈ ರೀತಿ ಸಂನ್ಯಾಸಿಗಳಾಗಿ ಬದುಕನ್ನು ನಡೆಸುವವರು ಸರ್ವ ಸಂಗ ಪರಿತ್ಯಾಗಿಗಳು; ಕೌಟುಂಬಿಕ ಕರ್ತವ್ಯದಿಂದ ಮುಕ್ತರಾಗಿರುವವರು. ಆಧ್ಯಾತ್ಮಿಕ ಜೀವನದ ಅತಿಶ್ರೇಷ್ಠ ಗುರಿಯಾದ ಮೋಕ್ಷವನ್ನು ಈ ಜೀವನದಲ್ಲೇ ಹೊಂದಬೇಕೆಂಬುದು ಸಂನ್ಯಾಸಿಯ ಗುರಿ. ಅದಕ್ಕಾಗಿ ಕ್ರಮಕ್ರಮವಾಗಿ ಸಾಧನೆ ಮಾಡುತ್ತ ಎಲ್ಲ ಕರ್ಮಗಳನ್ನೂ ಕಳೆದುಕೊಂಡು ಎಷ್ಟೋ ಜನ್ಮಗಳ ನಂತರ ಮುಕ್ತಿ ಪಡೆಯುವುದು ಸಂನ್ಯಾಸಿಯ ವಿಧಾನವಲ್ಲ; ತೀವ್ರ ವೈರಾಗ್ಯ ಹೊಂದಿ, ಎಲ್ಲ ನಿತ್ಯ-ನೈಮಿತ್ತಿಕ ಕರ್ಮಗಳನ್ನೂ ಮುಗಿಸಿಕೊಂಡು, ಯೋಗ್ಯ ಗುರುವಿನ ಬಳಿಗೆ ಹೋಗಿ, ಅವನಿಂದ ಉಪದೇಶ ಪಡೆದು, ತಕ್ಕ ಸಮಯದಲ್ಲಿ ಸಂನ್ಯಾಸದೀಕ್ಷೆಯನ್ನು ಪಡೆದು ತೀವ್ರತರ ತಪಸ್ಸು, ಯೋಗ, ಸಾಧನೆಗಳಲ್ಲಿ ತೊಡಗುತ್ತಾನೆ; ಅವುಗಳ ಪರಿಣಾಮವಾಗಿ ಈ ಜೀವನದಲ್ಲೇ ಸಾಕ್ಷಾತ್ಕಾರ ಹೊಂದುವ ಗುರಿಯತ್ತ ಮುನ್ನಡೆಯುತ್ತಾನೆ. ಗೃಹಸ್ಥ ಜೀವನ ನಡೆಸುವವರು ಬಹುಪಾಲು ಜನ; ಎಲ್ಲೋ ಬೆರಳೆಣಿಕೆಯಷ್ಟು ಜನ ಮಾತ್ರ ಸಂನ್ಯಾಸಿಗಳಾಗುವರು. ಕಾರಣ, ಎಲ್ಲರಿಗೂ ಪ್ರಪಂಚ ತ್ಯಾಗ, ಆಸೆ-ಆಕಾಂಕ್ಷೆಗಳ ತ್ಯಾಗ ಹಾಗೂ ಪ್ರಾಪಂಚಿಕ ಕರ್ತವ್ಯಗಳಿಂದ ಬಿಡುಗಡೆ ಅಸಾಧ್ಯ. ಆದರೆ ಕೆಲವರು ತೀವ್ರ ವೈರಾಗ್ಯ ಹೊಂದಿ, ಎಲ್ಲ ಬಂಧನಗಳನ್ನೂ ಕಡಿದೊಗೆದು ತನ್ನ ಗುರಿಸಾಧನೆಗೆ ಮುನ್ನುಗ್ಗಿ ಹೋಗುತ್ತಾರೆ. ಹೀಗಾಗಿ ಈ ಮಾರ್ಗವನ್ನು ತುಳಿಯುವವರು ಅಸಾಧಾರಣ ಮನೋಬಲ, ವೈರಾಗ್ಯ ಹಾಗೂ ನಿಶ್ಚಿತ ಬುದ್ಧಿಶಕ್ತಿ ಇವನ್ನು ಹೊಂದಿರುತ್ತಾರೆ.

## ಸಂನ್ಯಾಸ ಮಾರ್ಗದ ಪ್ರಾಚೀನತೆ

ಋಗ್ವೇದದಲ್ಲೇ ಸಂನ್ಯಾಸ ಜೀವನದ ಕುರುಹುಗಳಿವೆ ಎನ್ನುತ್ತಾರೆ. ವೇದಮಂತ್ರಗಳನ್ನು ರಚಿಸಿದ ಋಷಿಗಳು ಗೃಹಸ್ಥರಾಗಿದ್ದರು; ಆದರೆ ಅವರು ಧ್ಯಾನಪರರು, ಯಾಗಯಜ್ಞ ಹಾಗೂ ಉಪಾಸನೆಗಳಲ್ಲಿ ನಿರತರಾದವರು. ಬಹುಶಃ ಈ ಬಗೆಯ ಋಷಿಮುನಿಗಳ ಪರಂಪರೆಯಲ್ಲೇ ಕೆಲವು ಮಂದಿ ವಿರಕ್ತರೂ, ಕೌಟುಂಬಿಕ ಅಥವಾ ಪ್ರಾಪಂಚಿಕ ಬಂಧನಗಳಿಂದ ಕಳಚಿಕೊಂಡು ಏಕಾಂತ ಜೀವನ ನಡೆಸುತ್ತ ತಪಸ್ಸು, ಧ್ಯಾನಗಳಲ್ಲಿ ನಿರತರಾದವರು ಇದ್ದಿರಬಹುದು. ಆದರೆ ಸಂನ್ಯಾಸ ಜೀವನದ ಸ್ಪಷ್ಟ ದಾಖಲೆ ಕಾಣಬರುವುದು ವೇದಗಳ ಅಂತಿಮ ಭಾಗವಾದ ಉಪನಿಷತ್ತುಗಳಲ್ಲಿ. ಬೃಹದಾರಣ್ಯಕ, ಮುಂಡಕ ಉಪನಿಷತ್ತುಗಳಲ್ಲಿ ಸಂನ್ಯಾಸ ಜೀವನದ ಬಗ್ಗೆ ವಿವರಣೆಗಳು ಕಂಡುಬರುತ್ತವೆ. ಆದರೆ ಸಂನ್ಯಾಸವೆಂಬುದು ಒಂದು ಪರಂಪರೆಯಾಗಿ, ವಿಧಿಪೂರ್ವಕವಾದ ದೀಕ್ಷೆಯಾಗಿ ಆ ಕಾಲದಲ್ಲೇ ರೂಪುಗೊಂಡಿತ್ತೇ ಇಲ್ಲವೇ ಎಂದು ಸ್ಪಷ್ಟವಾಗಿ ಹೇಳಲಾಗದು. ವರ್ಣಾಶ್ರಮ ಜೀವನ ವಿಧಾನಗಳಲ್ಲಿ ಚಾತುರ್ವರ್ಣ್ಯ ವ್ಯವಸ್ಥೆಯೇ ಪ್ರಾಚೀನ; ನಾಲ್ಕು ಆಶ್ರಮಗಳ ಸಂಪ್ರದಾಯ ಈಚಿನದು ಎನ್ನುತ್ತಾರೆ. ದಾರ್ಶನಿಕ ಯುಗದಲ್ಲಿ ಈ ಸಂಪ್ರದಾಯ ಸ್ಪಷ್ಟವಾಗಿ ರೂಪುಗೊಂಡಿತ್ತು. ಆದರೆ ಪುರಾಣಗಳಲ್ಲಿ ಸಂನ್ಯಾಸ ಜೀವನದ, ಸಂನ್ಯಾಸಿಗಳ ವಿವರಣೆ ವಿಪುಲವಾಗಿ ಕಂಡುಬರುತ್ತದೆ. ಐತಿಹಾಸಿಕವಾಗಿ ಪುರಾಣಗಳ ರಚನೆ ಈಚಿನದು; ರಾಮಾಯಣ-ಮಹಾಭಾರತಗಳು ಅವಕ್ಕಿಂತಲೂ ಪ್ರಾಚೀನವೆನ್ನುತ್ತಾರೆ. ಈ ಎರಡು ಮಹಾಕಾವ್ಯಗಳಲ್ಲಂತೂ ಸಂನ್ಯಾಸ ಜೀವನದ ಬಗ್ಗೆ ಸಾಕಷ್ಟು ದಾಖಲೆಗಳಿವೆ. ಒಟ್ಟಿನಲ್ಲಿ ಐತಿಹಾಸಿಕವಾಗಿ ಸಂನ್ಯಾಸ ಜೀವನದ ಪರಂಪರೆ ಯಾವಾಗ ಆರಂಭವಾಯಿತೆಂದು ಖಚಿತವಾಗಿ ಹೇಳಲಾಗದಿದ್ದರೂ, ಅದಕ್ಕೆ ಸಹಸ್ರಾರು ವರ್ಷಗಳ ಪ್ರಾಚೀನತೆಯಿದೆಯೆಂದು ತಿಳಿದುಬರುತ್ತದೆ. ಬೌದ್ಧ

ಸಂನ್ಯಾಸೀ ಪರಂಪರೆ ಕ್ರಿಸ್ತ ಪೂರ್ವ ಆರೇಳು ಶತಮಾನಗಳಷ್ಟು ಹಿಂದಿನದು; ಅದಕ್ಕಿಂತಲೂ ಹಿಂದೆ ಹಿಂದೂ ಸಂನ್ಯಾಸಿ ಪರಂಪರೆ ರೂಪುಗೊಂಡಿತ್ತು ಎನ್ನುವುದರಲ್ಲಿ ಯಾವುದೇ ಸಂದೇಹವಿಲ್ಲ.

## ಸಂನ್ಯಾಸ ಜೀವನದ ಮಹತ್ವ

ವೇದಕಾಲಗಳಷ್ಟು ಹಿಂದಿನಿಂದಲೂ ಸಂನ್ಯಾಸ ಜೀವನಕ್ಕೆ ಮಹತ್ವ ನೀಡಿರಲು ಕಾರಣವೇನು? ಎಲ್ಲರಂತೆ ಪ್ರಾಪಂಚಿಕ ಜೀವನ ನಡೆಸದೆ, ಜೀವನದ ಸುಖಭೋಗಗಳಲ್ಲಿ ಮುಳುಗಿ ಹೋಗದೆ, ಸಂಪೂರ್ಣ ಭಿನ್ನವಾದ ಜೀವನಕ್ರಮವನ್ನು ಹಿಡಿಯಲು ಮೂಲ ಪ್ರೇರಣೆಯೇನು? ನಮ್ಮ ಪ್ರಾಚೀನ ಸಂತರು ಹಾಗೂ ದಾರ್ಶನಿಕರು ಕಂಡುಕೊಂಡ ಆಧ್ಯಾತ್ಮಿಕ ಸತ್ಯಗಳೇ ಇದಕ್ಕೆ ಪ್ರೇರಣೆಯೆನ್ನಬೇಕು. ವೇದ, ಉಪನಿಷತ್ತು, ವೇದಾಂತ ಇವು ರೂಪಿಸಿದ ತತ್ತ್ವಗಳು ಈ ಪ್ರಪಂಚವನ್ನು ಮೀರಿದ, ಈ ಪ್ರಪಂಚದಲ್ಲೂ ಓತಪ್ರೋತವಾಗಿರುವ, ನಿತ್ಯವೂ, ಶಾಶ್ವತವೂ, ಪರಿಪೂರ್ಣವೂ ಆಗಿರುವ ತತ್ತ್ವವನ್ನು 'ಬ್ರಹ್ಮ'ವೆಂದು ಕರೆದಿವೆ. ಪುರಾಣಗಳಲ್ಲೂ, ಇತಿಹಾಸಗಳಲ್ಲೂ ಸಾಮಾನ್ಯ ಜನರ ವಾಡಿಕೆಯ ಮಾತುಗಳಲ್ಲೂ 'ದೇವರು' 'ಭಗವಂತ' ಎಂದೂ ಈ ತತ್ತ್ವ ಕರೆಯಲ್ಪಟ್ಟಿದೆ. ಈ ಭಗವಂತನ ನೆಲೆಯೆಲ್ಲಿ? ಅವನ ಸ್ವರೂಪವೇನು? ಅದನ್ನು ಅರಿಯಬಹುದೆ? ಕಾಣಬಹುದೆ? — ಈ ಎಲ್ಲ ಪ್ರಶ್ನೆಗಳಿಗೆ ನಮ್ಮ ಶಾಸ್ತ್ರಗಳು 'ಹೌದು' ಎಂದು ಉತ್ತರ ನೀಡಿವೆ. ಭಾರತದಲ್ಲಿ ಅತಿಪ್ರಾಚೀನ ಕಾಲದಿಂದಲೇ ಕಂಡುಬರುವ ಸಾಧುಸಂತರ ಪರಂಪರೆ ಈ ಸಾಧ್ಯತೆಗೆ ಜೀವಂತ ನಿದರ್ಶನವನ್ನು ಒದಗಿಸಿಕೊಟ್ಟಿವೆ. ಹೀಗೆ ಶಾಸ್ತ್ರಗಳಿಂದಲೂ, ಪರಂಪರೆಯಿಂದಲೂ, ಕಣ್ಣೆದುರು ನಡೆದಾಡುವ ಸಾಧುಸಂತರಿಂದಲೂ ಭಗವಂತನ ಸಾಕ್ಷಾತ್ಕಾರದ ಆದರ್ಶವನ್ನು ಮೈಗೂಡಿಸಿಕೊಳ್ಳುವುದು ಭಾರತದಲ್ಲಿ ಅತ್ಯಂತ ಸಹಜವೆನಿಸಿದೆ. ಈ ರೀತಿ ಪ್ರೇರಣೆ ಹೊಂದುವವರ ಸಂಖ್ಯೆಯೇನೋ ಹಿರಿದು; ಆದರೆ ಸಂನ್ಯಾಸ ಸ್ವೀಕಾರ ಮಾಡುವವರು ಮಾತ್ರ ಕೆಲವರು. ಮಾನಸಿಕ ದಾರ್ಢ್ಯ, ಬೌದ್ಧಿಕ ಬೆಳವಣಿಗೆ, ವೈರಾಗ್ಯ ಪ್ರವೃತ್ತಿ ಇವುಗಳೊಂದಿಗೆ ಜನ್ಮಜನ್ಮಾಂತರಗಳ ಪುಣ್ಯ — ಇವೂ ಅಂಥವರಿಗೆ ಅಗತ್ಯವೆನ್ನುತ್ತಾರೆ.

ಭಗವಂತನೇ ಸತ್ಯ, ಪ್ರಪಂಚವೆಂಬುದು ಮಿಥ್ಯೆ; ಆದ್ದರಿಂದ ಸತ್ಯವನ್ನು ಕಾಣಬೇಕು, ಅನುಭವಿಸಬೇಕು — ಅದೊಂದೇ ಜೀವನದ ಗುರಿ ಎಂಬುದು ಸಂನ್ಯಾಸಿಯ ಆದರ್ಶ. ಈ ಕಾರಣಕ್ಕಾಗಿಯೇ ಕ್ಷಣಿಕವಾದ ಬದುಕನ್ನು, ಪ್ರಾಪಂಚಿಕ ಸುಖಭೋಗಗಳನ್ನು ಅವನು ನಿರಾಕರಿಸುತ್ತಾನೆ. ತಂದೆ, ತಾಯಿ, ಮಡದಿ-ಮಕ್ಕಳು, ಬಂಧು-ಬಳಗ, ಸ್ನೇಹಿತರು ಇವರೆಲ್ಲ ತನ್ನ ಆದರ್ಶದ, ತ್ಯಾಗದ ಜೀವನದಲ್ಲಿ ಅಡಚಣೆಯೆಂದೇ ಅವನು ಭಾವಿಸುತ್ತಾನೆ. ಹೀಗೆ ಎಲ್ಲ ಸಂಬಂಧಗಳನ್ನೂ ಕಡಿದುಕೊಂಡು, ಎಲ್ಲ ಆಸೆಗಳನ್ನೂ ತೊರೆದು ಅವನು ಗುರುವನ್ನರಸಿ ಹೋಗುತ್ತಾನೆ. ಗುರುವಿನ ಮಾರ್ಗದರ್ಶನದಂತೆ ಸಂನ್ಯಾಸ ಜೀವನ ನಡೆಸಿ, ತನ್ನ ಜೀವನವನ್ನೆಲ್ಲ ಉನ್ನತ ಜೀವನಕ್ಕಾಗಿ ಸಮರ್ಪಿಸುತ್ತಾನೆ. ಭಗವಾನ್ ಬುದ್ಧ, ಶ್ರೀ ಶಂಕರಾಚಾರ್ಯರಂತಹ ಮಹಾನ್ ವ್ಯಕ್ತಿಗಳು ಸ್ವತಃ ತಾವೇ ಸಂನ್ಯಾಸ ಜೀವನ ನಡೆಸಿ, ಅತ್ಯುನ್ನತ ಆದರ್ಶದ ಬದುಕಿಗೆ ಒಂದು ಮಾರ್ಗವನ್ನು ಹುಟ್ಟುಹಾಕಿದರು. ಅವರಂತೆಯೇ ಇನ್ನಿತರ ಸಾಧು-ಸಂತರು, ಅವತಾರಪುರುಷರುಗಳು ಸಂನ್ಯಾಸ ಜೀವನವನ್ನು ಎತ್ತಿ ಹಿಡಿದಿದ್ದನ್ನು ನಮ್ಮ ದೇಶದಲ್ಲಿ ಕಾಣುತ್ತೇವೆ.

## ಗೃಹಸ್ಥ ಜೀವನದ ಆದರ್ಶ

ಎಲ್ಲರಂತೆ ಮಡದಿ, ಮಕ್ಕಳೊಂದಿಗೆ ಬಂಧು, ಬಳಗದೊಂದಿಗೆ ಕೌಟುಂಬಿಕ ಜೀವನ ನಡೆಸುತ್ತ ಪ್ರಾಪಂಚಿಕ ಸುಖಭೋಗಗಳನ್ನು ಅನುಭವಿಸುತ್ತ ಬದುಕುವುದೇ ಗೃಹಸ್ಥ ಜೀವನವೆಂದು ಪರಿಗಣಿಸಲಾಗಿದೆ. ಆದರೆ ಈ ಜೀವನದಲ್ಲೂ ಶ್ರೇಷ್ಠ ಆದರ್ಶವಿದೆ, ಗೃಹಸ್ಥರಾದವರೂ ಪಾಲಿಸಬೇಕಾದ ಕರ್ತವ್ಯವಿದೆ; ಅವರದೂ ಒಂದು ಧರ್ಮ — ಇದು ಭಾರತದಲ್ಲಿ ಬೆಳೆದುಬಂದಿರುವ ಒಂದು ವಿಶಿಷ್ಟ ಭಾವನೆ. ಆಧ್ಯಾತ್ಮಿಕ ಸಾಧನೆ, ಸಾಕ್ಷಾತ್ಕಾರ — ಇವು ಕೇವಲ ಸಂನ್ಯಾಸಿಗಳಿಗಷ್ಟೇ ಅಲ್ಲ; ಸಮಾಜದಲ್ಲಿ ಬಹುಸಂಖ್ಯಾತರಾಗಿರುವ ಸಂಸಾರಿಗಳಿಗೂ ಇದು ಅಗತ್ಯವೆಂಬುದನ್ನು ಭಾರತೀಯ ಸಾಂಸ್ಕೃತಿಕ ಪರಂಪರೆ ತುಂಬ ಹಿಂದೆಯೇ ಕಂಡುಕೊಂಡಿತ್ತು. ಸಾಂಸಾರಿಕ, ಸಾಮಾಜಿಕ ನೀತಿನಿಯಮಗಳಿಗೆ ಬೆನ್ನೆಲುಬಾಗಿ ಆಧ್ಯಾತ್ಮಿಕ ಸತ್ಯ ಹಾಗೂ ತತ್ತ್ವಗಳನ್ನು ಇಟ್ಟುಕೊಂಡು, ಅದಕ್ಕನುಗುಣವಾಗಿ ಜೀವಿಸುವುದೇ ಅತ್ಯುತ್ತಮ ಗೃಹಸ್ಥ ಜೀವನವೆಂದು ಭಾವಿಸಲಾಗಿದೆ.

ಗೃಹಸ್ಥನಿಗೆ ಸಂನ್ಯಾಸಿಯೇ ಆದರ್ಶ; ಆದರೆ ಅವನಿಗೆ ಸರ್ವಸಂಗ ಪರಿತ್ಯಾಗ ಅಸಾಧ್ಯವಾದ ಕಾರಣ ಅವನು ಮಾನಸಿಕವಾಗಿ ನಿಸ್ಸಂಗತ್ವವನ್ನು ಆಚರಿಸಬೇಕು. ತನ್ನ ಕುಟುಂಬವನ್ನು ಪೋಷಿಸುವುದರ ಜೊತೆಗೆ ದಾನ, ಧರ್ಮ, ಆಚರಣೆಗಳ ಮೂಲಕ ಸಮಾಜದ ಬೆನ್ನೆಲುಬಾಗಿ ತನ್ನ ಕರ್ತವ್ಯ ನಿರ್ವಹಿಸಬೇಕು. ಸಂನ್ಯಾಸಿಗಳ ಜೀವನಕ್ಕೆ ಅಗತ್ಯವಾದ ಪೋಷಣೆಯನ್ನೂ ಗೃಹಸ್ಥರೇ ಮಾಡಬೇಕು; ಅದಕ್ಕೆ ಪ್ರತಿಯಾಗಿ ಸಂನ್ಯಾಸಿಯು ಗೃಹಸ್ಥರಿಗೆ ಸರಿಯಾದ ಧಾರ್ಮಿಕ ಜೀವನ ನಡೆಸುವ ಬಗೆಯನ್ನು ತೋರಿಸಿಕೊಡಬೇಕು. ನಮ್ಮ ಶಾಸ್ತ್ರಗಳಲ್ಲೂ, ಪರಂಪರೆಯಲ್ಲೂ ಈ ಬಗೆಯ ವ್ಯವಸ್ಥೆಯನ್ನು ಮಾಡಲಾಗಿದೆ. ಕುಟುಂಬ, ಸಮಾಜ ಹೀಗೆ ಹಲವು ವ್ಯಕ್ತಿಗಳೊಂದಿಗೆ ಜೀವಿಸುವ ಗೃಹಸ್ಥನು ತನ್ನ ಸ್ಥಾನದಲ್ಲಿದ್ದುಕೊಂಡೇ ಅನೇಕ ಸ್ತರದ ತ್ಯಾಗವನ್ನೂ ಮಾಡಬೇಕಾಗಿದೆ. ಅರ್ಥ, ಕಾಮಗಳನ್ನು ಧರ್ಮಕ್ಕನುಗುಣವಾಗಿ ಮಾಡಬೇಕು; ಅದೆಲ್ಲವೂ ಮೋಕ್ಷವನ್ನೇ ಗುರಿಯನ್ನಾಗಿ ಇಟ್ಟುಕೊಂಡಿರಬೇಕು. ಈ ಮೂಲಕ ಪ್ರಾಪಂಚಿಕ ಹಾಗೂ ಆಧ್ಯಾತ್ಮಿಕ ಜೀವನ ಎರಡನ್ನೂ ಬೆಸೆಯುತ್ತ, ಪ್ರಪಂಚವನ್ನು ದಾಟಿ ಆಧ್ಯಾತ್ಮಿಕತೆಯತ್ತ ಸಾಗುವ ಮಾರ್ಗ ಗೃಹಸ್ಥರದು. ಪುರುಷಾರ್ಥಗಳನ್ನು ನೆರವೇರಿಸುವ ಗೃಹಸ್ಥನ ಬದುಕು ಸುಲಭವಲ್ಲ; ಇಲ್ಲಿ ಏಳುವ, ಬೀಳುವ, ಮುಗ್ಗರಿಸುವ ಹಾಗೂ ದಾರಿ ತಪ್ಪುವ ಹಲವು ಮಂದಿ ಇದ್ದೇ ಇರುತ್ತಾರೆ. ಆದರೆ ಸರಿಯಾದ ಮಾರ್ಗವನ್ನು ಅನುಸರಿಸಿ ಶ್ರೇಷ್ಠ ಜೀವನ ನಡೆಸುವ ಸದ್ಗೃಹಸ್ಥರೇ ಗೃಹಸ್ಥ ಜೀವನಕ್ಕೆ ಆದರ್ಶ.

## ಎರಡೂ ಜೀವನ ಕ್ರಮಗಳ ವಿಶೇಷತೆ

ಸ್ವಾಮಿ ವಿವೇಕಾನಂದರು ಹೇಳುತ್ತಾರೆ: ''ಆಶ್ರಮಗಳಲ್ಲಿ ಯಾವುದೊಂದೂ ಇತರ ಆಶ್ರಮಗಳಿಗಿಂತ ತತ್ತ್ವತಃ ಹೆಚ್ಚಲ್ಲ. ಗೃಹಸ್ಥನ ಜೀವನವು, ಧಾರ್ಮಿಕ ಕರ್ಮನಿರತನಾದ ಬ್ರಹ್ಮ ಚಾರಿಯ ಜೀವನವು ಎಷ್ಟು ಮಹತ್ವಪೂರ್ಣವಾದುದೋ ಅಷ್ಟೇ ಮಹತ್ವಪೂರ್ಣವಾದುದು. ಸಿಂಹಾಸನಾರೂಢನಾದ ರಾಜನು ಎಷ್ಟು ದೊಡ್ಡವನೋ, ಅಷ್ಟೇ ದೊಡ್ಡವನು ರಸ್ತೆ ಗುಡಿಸುವವನು. ರಾಜನನ್ನು ಸಿಂಹಾಸನದಿಂದ ಇಳಿಸಿ, ಆತನಿಗೆ ಬೀದಿ ಗುಡಿಸುವ ಕಾರ್ಯವನ್ನು ನಿಯಮಿಸಿ; ಆತನು ಆ ಕಾರ್ಯವನ್ನು ಹೇಗೆ ಮಾಡುವನೋ ನೋಡಿ. ರಸ್ತೆ ಗುಡಿಸುವವನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ; ಆತನು ಹೇಗೆ ಒಡೆತನವನ್ನು ನಡೆಸುವನೋ ನೋಡಿರಿ. ಪ್ರಪಂಚವನ್ನು ಬಿಟ್ಟವನು ಪ್ರಪಂಚದೊಳಗೆ ಇರುವವನಿಗಿಂತ ದೊಡ್ಡವನೆಂದು ಹೇಳುವುದು ನಿರರ್ಥಕ. ಪ್ರಪಂಚದಲ್ಲಿದ್ದೂ ಈಶ್ವರಭಜನೆಯನ್ನು ಮಾಡುವುದು ಪ್ರಪಂಚವನ್ನು ಬಿಟ್ಟು ಮನ ಬಂದಂತೆ ಸುಲಭಜೀವನವನ್ನು ನಡೆಸಿಕೊಂಡು ಹೋಗುವುದ ಕ್ಕಿಂತಲೂ ಕಠಿಣತರ. ಭಾರತವರ್ಷದಲ್ಲಿ ಈ ನಾಲ್ಕು ಆಶ್ರಮಗಳು ಈಚೆಗೆ ಎರಡಕ್ಕಿಳಿದಿವೆ — ಗೃಹಸ್ಥಾಶ್ರಮ, ಸಂನ್ಯಾಸಾಶ್ರಮ. ಗೃಹಸ್ಥನು ಮದುವೆ ಮಾಡಿಕೊಂಡು ಪೌರನ ಕರ್ತವ್ಯಗಳನ್ನು ನಡೆಸುತ್ತಾನೆ. ಸಂನ್ಯಾಸಿಯ ಕರ್ತವ್ಯವೇನೆಂದರೆ, ಧರ್ಮಕಾರ್ಯ ದಲ್ಲಿ ತನ್ನ ಸರ್ವಶಕ್ತಿಯನ್ನೂ ವಿನಿಯೋಗಿಸಿ, ಈಶ್ವರೋಪಾಸನೆ ಯನ್ನು ಮಾಡುತ್ತ ಭಗವದ್ವಿಷಯವನ್ನು ಬೋಧಿಸುವುದು.''
*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂಪುಟ ೧, ಪು. ೪೩)*

ಒಬ್ಬೊಬ್ಬ ವ್ಯಕ್ತಿಯ ಸಾಮರ್ಥ್ಯ, ಮನೋಭಾವಕ್ಕನುಗುಣ ವಾಗಿ ಜೀವನದಲ್ಲಿ ಅವನವನ ಸ್ಥಾನಮಾನಗಳು ನಿರ್ಣಯಿಸ ಲ್ಪಡುತ್ತವೆ. ಕೇವಲ ಅಧಿಕಾರ, ಸಂಪತ್ತು, ಜಾತಿ ಇತ್ಯಾದಿಗಳ ಕಾರಣದಿಂದ ಅವನು ಶ್ರೇಷ್ಠನೋ ಕನಿಷ್ಠನೋ ಆಗಬೇಕಿಲ್ಲ ವೆಂಬುದು ಪ್ರಕೃತಿ ನಿಯಮ. ಆದರೆ ಮಾನವ ತನ್ನ ಸ್ವಾರ್ಥದ ದೃಷ್ಟಿಯಿಂದ ಇದಕ್ಕೆ ವಿರುದ್ಧವಾಗಿ ನಡೆದರೆ, ಸಮಾಜದ ಸಮ ತೋಲನ ತಪ್ಪಿ ಹೋಗುವುದು. ಈ ಕಾರಣಕ್ಕಾಗಿ ಪ್ರತಿಯೊಂದು ಹಂತದ, ಅವಸ್ಥೆಯ ವ್ಯಕ್ತಿಗೆ ಸರಿಯಾದ ಆದರ್ಶ, ಕರ್ತವ್ಯ ಇವನ್ನು ನಮ್ಮ ಪರಂಪರೆ ವಿಧಿಸಿದೆ. ಶ್ರುತಿ, ಸ್ಮೃತಿಗಳು ರೂಪಿ ಸಿರುವ ಸಾಮಾಜಿಕ, ಧಾರ್ಮಿಕ ಹಾಗೂ ನೈತಿಕ ನಿಯಮಗಳಿಗೆ ಅನುಗುಣವಾಗಿ ಬಳಕೆಗೆ ಬಂದ ವರ್ಣಾಶ್ರಮ ಧರ್ಮಗಳೂ, ಚತುರ್ವಿಧ ಪುರುಷಾರ್ಥಗಳೂ ವ್ಯಕ್ತಿಯ ಹಾಗೂ ಸಮಾಜದ ಸಮತೋಲನವನ್ನು ಕಾಪಾಡುವುದಕ್ಕಾಗಿ ರೂಪಿತವಾದ ವ್ಯವಸ್ಥೆ ಯೆನಿಸುತ್ತದೆ.

ಈ ಹಿನ್ನೆಲೆಯಲ್ಲಿ, ಸಂನ್ಯಾಸಿಯ ಗುರಿ ಹೇಗೆ ಮೋಕ್ಷವೋ, ಗೃಹಸ್ಥನ ಗುರಿಯೂ ಮೋಕ್ಷವೇ ಆಗಿದೆ. ಸಂನ್ಯಾಸಿಯ ವಿಧಾನ ಬೇರೆ, ಗೃಹಸ್ಥನ ವಿಧಾನ ಬೇರೆ ಅಷ್ಟೆ. ಮೊದಲನೆಯದು ನಿವೃತ್ತಿ ಮಾರ್ಗ, ಎರಡನೆಯದು ಪ್ರವೃತ್ತಿ ಮಾರ್ಗ.

## ಆಧುನಿಕ ಜೀವನದಲ್ಲಿ

ಆಧುನಿಕ ಭಾರತವು ಹಲವು ಬಗೆಯ ಬದಲಾವಣೆಗಳಿಗೆ ತನ್ನನ್ನು ಒಡ್ಡಿಕೊಂಡಿದೆ. ಜಾಗತೀಕರಣ, ವಾಣಿಜ್ಯ ವ್ಯವಹಾರಗಳ ಭರಭರಾಟೆ, ತಂತ್ರಜ್ಞಾನ ಹಾಗೂ ಸಮೂಹ ಮಾಧ್ಯಮಗಳ ಮಿತಿಮೀರಿದ ಪ್ರಭಾವ — ಇವುಗಳ ನಡುವೆ ನಮ್ಮ ಸಾಂಸ್ಕೃತಿಕ, ಆಧ್ಯಾತ್ಮಿಕ ಮೌಲ್ಯಗಳು ಕುಗ್ಗುತ್ತಿವೆ. ಈ ಸಂದರ್ಭದಲ್ಲಿ ಸಂನ್ಯಾಸ ಹಾಗೂ ಗೃಹಸ್ಥಜೀವನದ ಶ್ರೇಷ್ಠ ಆದರ್ಶಗಳನ್ನು ಪುನರುಜ್ಜೀವನ ಗೊಳಿಸಬೇಕಾದ ಅಗತ್ಯವಿದೆ. ಎಲ್ಲ ಅಸಮತೋಲನವನ್ನೂ ಮತ್ತೆ ಸರಿಯಾದ ನೆಲೆಗೆ ತರುವ ಶಕ್ತಿ ಪ್ರಕೃತಿಗಿದೆ; ಆದರೆ ಅಂತಹ ಸಂದರ್ಭಗಳಲ್ಲಿ ಅನೇಕ ಬಾರಿ ಅದು ವಿನಾಶಕಾರಿ ಪರಿಣಾಮ ಗಳನ್ನು ತಂದೊಡ್ಡುವುದು. ವಿದೇಶೀ ಆದರ್ಶಗಳನ್ನು ಅನು ಕರಿಸುವ ಭರದಲ್ಲಿ ನಮ್ಮ ಪಾರಂಪರಿಕ ಧ್ಯೇಯ-ಆದರ್ಶಗಳನ್ನು ಮರೆತರೆ ನಾವು ನಮ್ಮ ದೇಶವು ತಲೆತಲಾಂತರದಿಂದ ಅನುಸರಿಸಿ ಕೊಂಡು ಬಂದ ಶ್ರೇಷ್ಠ ಮೌಲ್ಯಗಳನ್ನೂ, ಜೀವನಕ್ರಮವನ್ನೂ ಮರೆತುಬಿಡುವ ಅಪಾಯವಿದೆ. ಇದರಿಂದ ನಾವು ಅಮೂಲ್ಯ ವಾದ ಸಾಂಸ್ಕೃತಿಕ ಆದರ್ಶಗಳನ್ನು ಹಾಗೂ ಜೀವನಪದ್ಧತಿಯನ್ನು ಕಳೆದುಕೊಳ್ಳುತ್ತೇವೆ. ಅದಕ್ಕೆ ಬದಲಾಗಿ, ಆಧುನಿಕ ಜೀವನದಲ್ಲಿ ಹಾನಿಕರವಲ್ಲದ ಬದಲಾವಣೆಗಳನ್ನು ಮಾಡಿಕೊಂಡು, ನಮ್ಮ ಸಾಂಸ್ಕೃತಿಕ, ಧಾರ್ಮಿಕ, ಆಧ್ಯಾತ್ಮಿಕ ಆದರ್ಶಗಳ ಮೂಲ ಬೇರನ್ನು ಉಳಿಸಿಕೊಳ್ಳಲು ಪ್ರಯತ್ನಿಸಬೇಕು. ಇದು ಅತ್ಯಂತ ವಿವೇಕದಿಂದ ಕೂಡಿದ ಮಾರ್ಗವಾಗಿದೆ. ಈ ಹಿನ್ನೆಲೆಯಲ್ಲಿ ಸಂನ್ಯಾಸ-ಗೃಹಸ್ಥ ಜೀವನದ ಮೌಲ್ಯಗಳನ್ನು ನಾವು ಸಮರ್ಪಕವಾಗಿ ಅರಿತು ಕೊಂಡು, ಅದಕ್ಕನುಗುಣವಾಗಿ ಬದುಕುವುದನ್ನು ಕಲಿಯಬೇಕು.

ಶ್ರೀರಾಮಕೃಷ್ಣರು ಸಂನ್ಯಾಸಿಗಳಿಗೆ ಅತ್ಯುನ್ನತ ಆದರ್ಶ ಪ್ರಾಯರು; ಸಂನ್ಯಾಸ ಸ್ವೀಕಾರ ಮಾಡಿ ಅತ್ಯಲ್ಪ ಕಾಲದಲ್ಲೇ ನಿರ್ವಿ ಕಲ್ಪ ಸಮಾಧಿಯ ಅನುಭವವನ್ನು ಪಡೆದರು. ತಮ್ಮ ಜೀವನ ದುದ್ದಕ್ಕೂ ತ್ಯಾಗಜೀವನವನ್ನು ನಡೆಸಿ ಅತಿಶ್ರೇಷ್ಠ ಸಂನ್ಯಾಸಿಯೆನಿಸಿ ಕೊಂಡರು. ಅಂತೆಯೇ ಅವರು ವಿವಾಹವಾಗಿದ್ದರೂ ಅತಿ ಪವಿತ್ರ ಜೀವನವನ್ನು ನಡೆಸುವ ಮೂಲಕ ಗೃಹಸ್ಥರಿಗೂ ಅತ್ಯುಚ್ಚ ಆದರ್ಶ ವನ್ನು ತೋರಿಸಿಕೊಟ್ಟರು. ಹೀಗೆ ಸಂನ್ಯಾಸ, ಗೃಹಸ್ಥ — ಈ ಎರಡೂ ಮಾರ್ಗಗಳ ಗುರಿ, ಆದರ್ಶಗಳು ದೈವಸಾಕ್ಷಾತ್ಕಾರವೇ ಆಗಿದೆ; ಇದನ್ನು ಇಂದು ನಾವು ಕಂಡುಕೊಳ್ಳಬೇಕಾಗಿದೆ.

### ಮಾರ್ಚ್ ತಿಂಗಳ ಕಾರ್ಯಕ್ರಮಗಳು

| | | |
|---|---|---|
| ೨ | ಶನಿವಾರ | ಏಕಾದಶಿ |
| ೪ | ಸೋಮವಾರ | ಮಹಾಶಿವರಾತ್ರಿ |
| ೮ | ಶುಕ್ರವಾರ | ಶ್ರೀರಾಮಕೃಷ್ಣ ಜಯಂತಿ |
| ೧೭ | ಭಾನುವಾರ | ಏಕಾದಶಿ |
| ೨೪ | ಭಾನುವಾರ | ಸ್ವಾಮಿ ಯೋಗಾನಂದ ಜಯಂತಿ |
| ೩೧ | ಭಾನುವಾರ | ಏಕಾದಶಿ |

# ಆಧ್ಯಾತ್ಮಿಕ ಜೀವನದ ಸಾರ



ಎಲೆ ಅಡಿಕೆ ಹಾಕಿಕೊಳ್ಳುವುದು, ಮೀನು ತಿನ್ನುವುದು, ತಂಬಾಕು ಸೇವಿಸುವುದು, ಮೈಗೆ ಎಣ್ಣೆ ಸವರಿಕೊಳ್ಳುವುದು — ಇವೆಲ್ಲಾ ಅಂಥಾ ಕೆಡುಕಾದುದೇನಲ್ಲ. ಕೇವಲ ಇವನ್ನೇ ತ್ಯಜಿಸಿದರೆ ದೊರೆಯುವ ಪುರುಷಾರ್ಥವೇನು? ಅತ್ಯಂತ ಆವಶ್ಯಕವಾದುದು ಕಾಮಕಾಂಚನ ತ್ಯಾಗ. ಆ ತ್ಯಾಗವೇ ನಿಜವಾದ ತ್ಯಾಗ. ಗೃಹಸ್ಥರು ಆಗಾಗ ನಿರ್ಜನ ಪ್ರದೇಶಕ್ಕೆ ಹೋಗಿ, ಸಾಧನೆ-ಭಜನೆ ಮಾಡಿ ಭಕ್ತಿಯನ್ನು ಗಳಿಸಿಕೊಳ್ಳಬೇಕು. ಅವರು ಮಾನಸಿಕವಾಗಿ ತ್ಯಾಗ ಮಾಡಬೇಕು. ಆದರೆ ಸಂನ್ಯಾಸಿ ಮಾನಸಿಕವಾಗಿ, ಬಾಹ್ಯಿಕವಾಗಿ — ಈ ಎರಡು ವಿಧದಿಂದಲೂ ತ್ಯಾಗಮಾಡಬೇಕು.

ಮುಖ್ಯವಾಗಿ ಮಾಡಬೇಕಾದ್ದು ಭಗವಂತನನ್ನು ಪ್ರೀತಿಸುವುದು, ಆತನ ಮಾಧುರ್ಯವನ್ನು ಸವಿಯುವುದು. ಆತ ರಸ, ಭಕ್ತ ಆಸ್ವಾದಕ. ಭಕ್ತ ಭಗವದಾನಂದವನ್ನು ಸವಿಯುತ್ತಾನೆ. ಆತ ತಾವರೆ ಹೂವು, ಭಕ್ತ ದುಂಬಿ. ಭಕ್ತ ತಾವರೆ ಹೂವಿನ ಮಧುವನ್ನು ಹೀರುತ್ತಾನೆ.

ಭಗವಂತನನ್ನು ಯಾರು ತಾನೆ ಅರಿತುಕೊಳ್ಳಬಲ್ಲರು? ನಾನು ಆ ಪ್ರಯತ್ನವನ್ನೇ ಮಾಡುವುದಿಲ್ಲ. ನಾನು ಆತನನ್ನು ಕೇವಲ 'ತಾಯಿ' ಅಂತ ಮಾತ್ರ ಕೂಗುತ್ತೇನೆ. ತಾಯಿ ತನ್ನ ಇಚ್ಛೆಯಿದ್ದಂತೆ ಮಾಡಲಿ. ಆಕೆಯ ಇಚ್ಛೆಯಿದ್ದರೆ ತಾನೇ ತೋರಿಸಿಕೊಡುತ್ತಾಳೆ — ತಾನು ಏನು ಎಂಬುದನ್ನು. ಇಲ್ಲದಿದ್ದರೆ ಇಲ್ಲ. ನನ್ನದು ಬೆಕ್ಕಿನ ಮರಿಯ ಸ್ವಭಾವ. ಕೇವಲ ಅದು, 'ಮಿಯಾವ್!' 'ಮಿಯಾವ್!' ಅಂತ ಕೂಗುತ್ತದೆ. ಉಳಿದ ತನ್ನ ಯೋಗಕ್ಷೇಮವನ್ನೆಲ್ಲಾ ತಾಯಿಗೆ ಬಿಟ್ಟುಬಿಟ್ಟಿರುತ್ತದೆ. ತಾಯಿಬೆಕ್ಕು ಕೆಲವು ವೇಳೆ ಮರಿಯನ್ನು ಅಡಿಗೆಮನೆಯಲ್ಲಿ, ಇನ್ನು ಕೆಲವು ವೇಳೆ ಯಜಮಾನನ ಹಾಸಿಗೆ ಮೇಲೆ ಇಡುತ್ತದೆ. ಚಿಕ್ಕ ಮಗುವಿಗೆ ತಾಯಿ ಮಾತ್ರ ಬೇಕು.

ಅತಿಯಾಗಿ ಬಾಹ್ಯಾಚಾರದಲ್ಲಿ ತೊಡಗಬೇಡ. ಒಮ್ಮೆ ಒಬ್ಬ ಸಾಧುವಿಗೆ ತಡೆಯಲಾರದ ಬಾಯಾರಿಕೆಯಾಯಿತು. ಚಕ್ಕಳದಲ್ಲಿ ನೀರು ಹೊತ್ತುಕೊಂಡು ಹೋಗುತ್ತಿದ್ದ ಒಬ್ಬ ವ್ಯಕ್ತಿ ನೀರು ಕೊಡಲು ಮುಂದೆ ಬಂದ. ಸಾಧು ಆತನನ್ನು ಕೇಳಿದ: 'ಏನು, ನಿನ್ನ ಚೀಲವನ್ನು ಚೆನ್ನಾಗಿ ತೊಳೆದಿದ್ದೀಯಾ?' ಆತ ಹೇಳಿದ: 'ಸ್ವಾಮಿ, ನನ್ನ ಚೀಲ ಸಂಪೂರ್ಣವಾಗಿ ಪರಿಶುದ್ಧವಾಗಿದೆ. ಆದರೆ ನಿಮ್ಮ ಚೀಲದೊಳಗೆ ಮಲಮೂತ್ರ, ಇನ್ನೂ ಏನೇನೋ ಕಶ್ಮಲ ತುಂಬಿವೆ. ಆದ್ದರಿಂದ ನಾನು ಹೇಳುತ್ತೇನೆ. ನೀವು ನಿಸ್ಸಂಕೋಚವಾಗಿ ನನ್ನ ಚೀಲದಿಂದ ನೀರು ಕುಡಿಯಬಹುದು. ಇದರಿಂದ ನಿಮಗೆ ಯಾವ ಕೇಡೂ ಸಂಭವಿಸದು.' 'ನಿಮ್ಮ ಚೀಲ' ಎಂಬುದಾಗಿ ಆ ನೀರು ಹೊರುವ ವ್ಯಕ್ತಿ ಹೇಳಿದುದರ ಅರ್ಥ ದೇಹ, ಹೊಟ್ಟೆ ಇತ್ಯಾದಿ.

ನಿಜವಾದ ಶ್ರದ್ಧೆಯಿಂದಲೇ ಆತನ ಸಾಕ್ಷಾತ್ಕಾರವನ್ನು ಪಡೆದುಕೊಂಡುಬಿಡಬಹುದು. ಭಗವಂತನ ಸಂಬಂಧವಾಗಿ ಹೇಳಿರುವುದರಲ್ಲೆಲ್ಲಾ ಪೂರ್ಣ ಶ್ರದ್ಧೆಯಿಡುವುದಾದರೆ, ಸಾಕ್ಷಾತ್ಕಾರ ಇನ್ನೂ ಬೇಗ ದೊರೆತುಬಿಡುತ್ತದೆ. ಹಸು ಆರಿಸಿಕೊಂಡು ಮೇವು ಮೇಯ್ದರೆ ಕಡಿಮೆ ಹಾಲು ಕೊಡುತ್ತದೆ. ಆದರೆ ಅದು ಎಲ್ಲಾ ವಿಧದ ಗಿಡ, ಗಡ್ಡೆಗಳನ್ನು ತಿಂದಿತು ಎಂದರೆ, ಧಾರಾಕಾರವಾಗಿ ಹಾಲು ಕರೆಯುತ್ತದೆ.

ಯಾರ ಮನಸ್ಸು, ಪ್ರಾಣ, ಅಂತರಾತ್ಮ ಭಗವದ್ಗತವಾಗಿದೆಯೊ ಆತನೇ ಸಾಧು. ಯಾರು ಕಾಮಕಾಂಚನ ತ್ಯಾಗಿಯೊ ಆತನೇ ಸಾಧು. ಯಾರು ಸಾಧುವೋ ಆತ ಹೆಂಗಸರನ್ನು ಎಂದಿಗೂ ಐಹಿಕ ದೃಷ್ಟಿಯಿಂದ ನೋಡುವುದಿಲ್ಲ. ಸರ್ವದಾ ಅವರಿಂದ ದೂರದಲ್ಲೆ ಇರುತ್ತಾನೆ. ಒಂದು ಪಕ್ಷ ಅವರನ್ನು ಸಮೀಪಿಸಬೇಕಾಗಿ ಬಂದರೆ ಅವರನ್ನು ಮಾತೃದೃಷ್ಟಿಯಿಂದ ನೋಡುತ್ತ ಅವರನ್ನು ಪೂಜೆಮಾಡುತ್ತಾನೆ. ಸಾಧು ಯಾವಾಗಲೂ ಭಗವಚ್ಚಿಂತನೆಯನ್ನೇ ಮಾಡುತ್ತಾನೆ. ಭಗವತ್ಸಂಬಂಧವಾಗಿ ಹೊರತು ಬೇರೆ ಯಾವ ಮಾತನ್ನೂ ಆಡುವುದಿಲ್ಲ. ಸರ್ವಭೂತಗಳಲ್ಲಿಯೂ ಭಗವಂತನೇ ಇದ್ದಾನೆ ಎಂಬುದನ್ನು ಅರಿತು ಅವರ ಸೇವೆಯನ್ನು ಮಾಡುತ್ತಾನೆ. ಸಾಮಾನ್ಯವಾಗಿ ಇವು ಸಾಧುವಿನ ಲಕ್ಷಣಗಳು.

ಫುಟ್‌ಪಾತಿನಲ್ಲಿರುವ ಮರಗಳನ್ನು ನೀನು ನೋಡಿಲ್ಲವೇನು? ಅವು ಸಸಿಯಾಗಿರುವವರೆಗೆ ಬೇಲಿ ಹಾಕಬೇಕು. ಇಲ್ಲದಿದ್ದರೆ ದನ, ಕರು, ಆಡು, ಅವನ್ನು ತಿಂದುಬಿಡುತ್ತವೆ. ಆದರೆ ಗಿಡದ ಕಾಂಡ ದಪ್ಪವಾಯಿತು ಎಂದರೆ, ಬಳಿಕ ಬೇಲಿ ಬೇಕಾಗಿರುವುದಿಲ್ಲ. ಅನಂತರ ಅದಕ್ಕೆ ಆನೆಯನ್ನು ತಂದು ಕಟ್ಟಿದರೂ ಅದಕ್ಕೇನೂ ಆಗುವುದಿಲ್ಲ. ಅದೇ ರೀತಿಯಾಗಿ ನೀನು ಮನಸ್ಸನ್ನು ಬಲವಾದುದನ್ನಾಗಿ ಮಾಡಿಕೊಂಡು ಬಿಟ್ಟಿದ್ದೇ ಆದರೆ ಇನ್ನು ಚಿಂತೆಯೇನು? ಭಯವೇನು? ವಿವೇಕವನ್ನು ಗಳಿಸಿಕೊಳ್ಳಲು ಮೊದಲು ಪ್ರಯತ್ನಪಡು. ಕೈಗೆ ಎಣ್ಣೆ ಸವರಿಕೊಂಡು ಹಲಸಿನ ಹಣ್ಣು ಬಿಡಿಸು. ಆಗ ಅದರ ಅಂಟು ಅಂಟಿಕೊಳ್ಳುವುದಿಲ್ಲ.

ಯಾರು ವಿವೇಕವನ್ನು ಗಳಿಸಿಕೊಂಡಿದ್ದಾರೊ ಅವರಿಗೆ ಗೊತ್ತಿದೆ, ಭಗವಂತನೊಬ್ಬನೇ ವಸ್ತು ಉಳಿದುದೆಲ್ಲಾ ಅವಸ್ತು ಎಂದು. ವಿವೇಕ ಉದಯವಾಯಿತು ಎಂದರೆ, ಭಗವಂತನನ್ನು ಅರಿಯಬೇಕು ಎಂಬ ಇಚ್ಛೆಯಾಗುತ್ತದೆ.

ಶ್ರೀರಾಮಕೃಷ್ಣ ವಚನವೇದದಿಂದ

# ಶ್ರೀಮಾತೆಯವರೊಂದಿಗೆ

ಮೂಲ ಬಂಗಾಳಿ : **ಸ್ವಾಮಿ ಶಾರದೇಶಾನಂದ** ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

ಶ್ರೀಮಾತೆಯವರ ಶಿಷ್ಯರೂ, ಅವರ ಆತ್ಮೀಯ ಸೇವಕರೂ ಆಗಿದ್ದ ಲೇಖಕರು ರಾಮಕೃಷ್ಣ ಮಹಾಸಂಘದ ಬಂಗಾಳಿ ಮಾಸಪತ್ರಿಕೆ 'ಉದ್ಬೋಧನ'ದಲ್ಲಿ ತಮ್ಮ ನೆನಪಿನ ಚಿತ್ರಗಳನ್ನು ಧಾರಾವಾಹಿಯಾಗಿ ಪ್ರಕಟಿಸಿದ್ದರು. ಅದರಿಂದ ಸಂಗ್ರಹಿಸಿದ ಭಾಗಗಳನ್ನು ಮುಂದೆ 'ಶತರೂಪೇ ಶಾರದಾ' ಎಂಬ ಬಂಗಾಳಿ ಗ್ರಂಥದಲ್ಲಿ ಲೇಖನರೂಪದಲ್ಲಿ ಪ್ರಕಟಿಸಲಾಯಿತು. ಜಯರಾಮಬಾಟಿಯಲ್ಲಿ ಶ್ರೀಮಾತೆಯವರ ಜೀವನ, ಅವರ ವ್ಯಕ್ತಿತ್ವದ ವಿಶಿಷ್ಟ ಅಂಶಗಳು — ಇವುಗಳನ್ನಿಲ್ಲಿ ಅಸದೃಶವಾಗಿ ಸೆರೆಹಿಡಿಯಲಾಗಿದೆ.

## ಮೊದಲನೆಯ ಭಾಗ

**ನಾ**ನು ಮೊದಲ ಬಾರಿ ಶ್ರೀಮಾತೆಯವರ ದರ್ಶನ ಪಡೆಯಲು 'ಉದ್ಬೋಧನ'ಕ್ಕೆ ಹೋಗಿದ್ದಾಗ ಅವರು ಜಯರಾಮಬಾಟಿಯಲ್ಲಿದ್ದರು. ಆದ ಕಾರಣ ಈ ಬಾರಿ ಅವರ ದರ್ಶನ ಪಡೆಯಲಾಗಲಿಲ್ಲ. ಆಗ 'ಉದ್ಬೋಧನ'ದಲ್ಲಿ ಗೋಲಾಪ್ ಮಾ ಇದ್ದರು. ಅವರ ದರ್ಶನ ಪಡೆದು ಅವರಿಗೆ ಪ್ರಣಾಮ ಮಾಡಿದೆ. ನಾವು ತುಂಬ ದೂರದಿಂದ ಬಹಳ ಕಷ್ಟಪಟ್ಟು ಬಂದೆವೆಂದು ತಿಳಿದು ಅವರು ವಿಶೇಷ ಪ್ರೀತಿ, ಸಹಾನುಭೂತಿಗಳಿಂದ ನಮ್ಮನ್ನು ಕಂಡರು. ಶ್ರೀಮಾತೆಯವರ ದರ್ಶನ ಪಡೆಯಲಾಗಲಿಲ್ಲವೆಂದು ಅವರು ತುಂಬ ಖೇದಕ್ಕೊಳಗಾದರು. ಅವರ ದರ್ಶನದಿಂದಾಗಿಯೇ ನಮಗೆ ಆನಂದವುಂಟಾದದ್ದನ್ನು ಕಂಡು ಗೋಲಾಪ್ ಮಾ ನಗುತ್ತ ಹೇಳಿದರು: 'ಮಧ್ವಭಾವೇ ಗುಡಂ ದದ್ಯಾತ್'( 'ಜೇನು ಸಿಗದ ಸಂದರ್ಭದಲ್ಲಿ ಬೆಲ್ಲವನ್ನಾದರೂ ಕೊಡಬೇಕು') ಆಗ ಶ್ರೀಮಾತೆಯವರನ್ನು ಕುರಿತು ನನಗೆ ಹೆಚ್ಚೇನೂ ಗೊತ್ತಿರಲಿಲ್ಲ. ಶ್ರೀರಾಮಕೃಷ್ಣರ ಸಹಧರ್ಮಿಣಿ ಇನ್ನೂ ಬದುಕಿದ್ದಾರೆ, 'ಉದ್ಬೋಧನ'ದಲ್ಲಿ ಅವರು ವಾಸವಾಗಿದ್ದಾರೆ ಎಂದು ನಾನು ಕೇಳಿದ್ದೆ. ಭಕ್ತರುಗಳು ಅವರ ದರ್ಶನ ಪಡೆಯುತ್ತಾರೆ, ಕೆಲವು ಬಾರಿ ಭಕ್ತರಿಗೆ ಅವರು ಮಂತ್ರದೀಕ್ಷೆಯನ್ನೂ ನೀಡುತ್ತಾರೆ ಎಂದು ಕೇಳಿದ್ದೆ. ಆದರೆ 'ಉದ್ಬೋಧನ'ದಲ್ಲಿ ಗೋಲಾಪ್ ಮಾ ಅವರ ಮಾತುಗಳಿಂದ ನನಗೆ ತಿಳಿದು ಬಂದಿದ್ದೇನೆಂದರೆ, ಶ್ರೀಮಾತೆ ತುಸು ಭಿನ್ನ ಸ್ವಭಾವದವರು; ಅವರ ದರ್ಶನ ಪಡೆಯುವುದೆಂದರೆ ಅದು ಮಹಾಭಾಗ್ಯದ ವಿಚಾರವೆಂದು. ಅನಂತರ ಶರತ್ ಮಹಾರಾಜ್ (ಸ್ವಾಮಿ ಶಾರದಾನಂದರು) ಹೇಳುವುದನ್ನು ಕೇಳಿದ್ದೆ, ''ಶ್ರೀಮಾತೆ ಹಾಗೂ ಶ್ರೀರಾಮಕೃಷ್ಣರು ಬೇರೆಯೇನು?'' ಈ ಮಾತನ್ನು ಕೇಳಿದ ನಂತರ ನನ್ನಲ್ಲಿ ಶ್ರೀಮಾತೆಯವರ ದರ್ಶನ ಪಡೆಯಲು ವಿಶೇಷ ಕಾತರತೆ ಉಂಟಾಯಿತು.

ಇನ್ನೊಂದು ಬಾರಿ ಶ್ರೀಮಾತೆಯವರ ದರ್ಶನ ಪಡೆಯಲು ಬಾಡಿಗೆ ಗಾಡಿ ಮಾಡಿಕೊಂಡು ಹೌರಾ ಸ್ಟೇಶನ್‌ವರೆಗೂ ಹೋಗಿದ್ದೆ. ಆದರೆ ನನ್ನನ್ನು ಸ್ಟೇಶನ್ನಿಗೆ ಬಿಡಲು ಬಂದಿದ್ದ ನನ್ನ ಸ್ನೇಹಿತ ಹಠಾತ್ತನೆ ಬಿದ್ದುಬಿಟ್ಟಿದ್ದ; ಅವನ ಒಂದು ಕೈ ಮುರಿದುಹೋಯಿತು. ಆಗ ಅವನನ್ನು ಕರೆದುಕೊಂಡು ಮತ್ತೆ ಮನೆಗೆ ಮರಳಬೇಕಾಯಿತು. ಇದಾಗಿ ಸುಮಾರು ಎರಡು ವರ್ಷಗಳ ನಂತರ ನವಾಸನದಲ್ಲಿ ವಾಸವಾಗಿದ್ದ ನನ್ನ ಸ್ನೇಹಿತನೊಬ್ಬ (ಅನಂತರ ಸ್ವಾಮಿ ಜ್ಞಾನಾನಂದರು) ಪತ್ರ ಬರೆದು ತಿಳಿಸಿದ್ದ, ಜಯರಾಮಬಾಟಿಗೆ ಹೋಗಿ ಶ್ರೀಮಾತೆಯವರ ದರ್ಶನ, ಅವರಿಂದ ಮಂತ್ರದೀಕ್ಷೆ ಪಡೆಯುವುದು ತುಂಬ ಸುಲಭ ಎಂದು. ಈ ನಡುವೆ ನನ್ನ ಹಿತೈಷಿಗಳಾದ ಇಬ್ಬರು ಸ್ನೇಹಿತರು ಶ್ರೀಮಾತೆಯವರಿಂದ ದೀಕ್ಷೆ ಪಡೆದಿದ್ದರು — ಒಬ್ಬರು 'ಉದ್ಬೋಧನ'ದಲ್ಲಿ; ಇನ್ನೊಬ್ಬರು ಜಯ



ರಾಮಬಾಟಿಯಲ್ಲಿ. ಅವರಿಂದ ನಾನು ಶ್ರೀಮಾತೆಯವರ ಬಗ್ಗೆ ತಿಳಿದೆ. ಒಂದು ದಿನ ನನಗೆ ಕನಸಿನಲ್ಲಿ ಶ್ರೀಮಾತೆಯವರ ದರ್ಶನವಾಯಿತು. ಅಕಸ್ಮಾತ್ತಾಗಿ ನನಗೆ ಶ್ರೀಮಾತೆಯವರ ಮೂರು ಫೋಟೋಗಳು ದೊರೆತವು. ಆಗ ಶ್ರೀಮಾತೆಯವರ ಭಾವಚಿತ್ರವನ್ನು ಪಡೆಯುವುದು ತುಂಬ ಕಷ್ಟದ ಕೆಲಸವಾಗಿತ್ತು. ಹಿಂದೆ ನಾನು ಹೇಳಿದ ಸ್ನೇಹಿತನೊಂದಿಗೆ ಮೊದಲ ಬಾರಿ ಜಯರಾಮಬಾಟಿಗೆ ಹೋದಾಗ ಬೆಳಗಿನ ಹೊತ್ತು; ಆ ದಿನ ಶ್ರೀಮಾತೆ ಕಾಳೀಮಾಮನ ಮನೆಯಲ್ಲಿದ್ದರು. ಶ್ರೀಮಾತೆಯವರ ಕೋಣೆಯ ಮುಂಭಾಗದಲ್ಲಿ ನಮ್ಮ ಸಾಮಾನುಗಳನ್ನಿಟ್ಟು , ಶ್ರೀರಾಮಕೃಷ್ಣರ ಭಾವಚಿತ್ರದ ಮುಂದೆ ಪ್ರಣಾಮ ಮಾಡಿದೆವು. ಅನಂತರ ನಾವು ಕಾಳೀಮಾಮನ ಮನೆಯಿಂದ ಹೊರಬರುತ್ತಿದ್ದೆವು. ನಮ್ಮನ್ನು ನೋಡಿದಕೂಡಲೇ ಅವರು ಬಾಗಿಲ ಮುಂದಿದ್ದ ದೊಡ್ಡ ಗಾತ್ರದ ಕಲ್ಲಿನ ಮೇಲೆ ಕುಳಿತುಕೊಂಡರು. ತಮ್ಮ ಕಾಲುಗಳನ್ನು ಇಳಿಬಿಟ್ಟು, ಎರಡೂ ಕೈಗಳನ್ನು ಮಡಿಲ ಮೇಲಿರಿಸಿ ಅವರು ಕುಳಿತಿದ್ದರು. ಅವರು ತೆಳುವಾದ ಕೆಂಪಂಚಿನ, ಬಿಳಿಬಣ್ಣದ ಸೀರೆಯನ್ನು

ಉಟ್ಟುಕೊಂಡಿದ್ದರು. ತಲೆಯ ಅರ್ಧಭಾಗವನ್ನು ಸೆರಗಿನಿಂದ ಮರೆಮಾಡಿದ್ದರು, ಬಲಭಾಗ ತೆರೆದಿತ್ತು. ಸ್ವಲ್ಪ ಗುಂಗುರು ಕೂದಲ ರಾಶಿ ಬಲಭುಜದ ಮೇಲೆ ಇಳಿಬಿದ್ದಿತ್ತು. ಕೈಗಳಲ್ಲಿ ಬಳೆ, ಹೆಬ್ಬೆರಳಲ್ಲಿ ಕಾಲುಂಗುರ, ಕೊರಳಲ್ಲಿ ತೆಳ್ಳಗಿನ ರುದ್ರಾಕ್ಷಿಮಾಲೆ. ಅವರು ಮೃದುವಾಗಿ ನಕ್ಕು, ನಮ್ಮತ್ತ ನೋಡಿ ನನ್ನ ಸ್ನೇಹಿತನನ್ನು ಕೇಳಿದರು: ''ಈ ಹುಡುಗ ಯಾರು, ಮಗು?'' ನನ್ನ ಸ್ನೇಹಿತ, ''ಅಮ್ಮಾ, ನಿಮ್ಮ ಶಿಷ್ಯನೇ. ನನ್ನ ಬಾಲ್ಯ ಸ್ನೇಹಿತ'' ಎಂದ. ನಾವಿಬ್ಬರೂ ಶ್ರೀಮಾತೆಗೆ ಪ್ರಣಾಮ ಮಾಡಿದೆವು. ಶ್ರೀಮಾತೆ ನಮ್ಮ ಮೇಲೆ ಪ್ರೀತಿ, ಆಶೀರ್ವಾದಗಳನ್ನು ಹರಿಸಿ, ನಮ್ಮನ್ನು ಮನೆಯೊಳಕ್ಕೆ ಕರೆದುಕೊಂಡು ಹೋದರು. ಶ್ರೀಮಾತೆಯವರನ್ನು ಕಂಡದ್ದಾಯಿತು, ಅವರ ಮಾತು ಕೇಳಿದ್ದಾಯಿತು ಶ್ರೀಮಾತೆ ನಿಜಕ್ಕೂ ಮಾತೆಯೇ! ಕನಸಿನಲ್ಲಿ ಕಂಡ ಮುಖ ಇದೇ ಎಂದು ನನಗನ್ನಿಸಿತು. ಏನೂ ತಿಳಿಯದೆ, ಏನೂ ಪರಿಚಯವಿಲ್ಲದೆ ಇದ್ದಕ್ಕಿದ್ದಂತೆ ಬಂದುಬಿಟ್ಟೆನಲ್ಲ ಎಂದೇನೂ ನನಗೆ ಅನ್ನಿಸಲಿಲ್ಲ. ಒಂದು ಕ್ಷಣದಲ್ಲೇ ಶ್ರೀಮಾತೆಯವರು ನನ್ನನ್ನು ತಮ್ಮವನನ್ನಾಗಿಸಿಕೊಂಡರು. ಭಯ, ಸಂಕೋಚ ಎಲ್ಲವನ್ನೂ ಅವರು ನಿವಾರಿಸಿಬಿಟ್ಟರು. ಊಟ ಮಾಡುವ ವೇಳೆ ಶ್ರೀಮಾತೆ ಸ್ವತಃ ತಾವೇ ನಮಗೆ ಬಡಿಸಿ ಊಟ ಮಾಡಿಸಿದರು. ಆಗ ತುಂಬಾ ಮಾತುಕತೆಗಳಾದವು. ಮಾತಿನ ಮಧ್ಯೆ ನನ್ನ ಸ್ನೇಹಿತ ಶ್ರೀಮಾತೆಯವರಿಗೆ ಹೇಳಿದ: ''ಇವನ (ಲೇಖಕನ) ಮೂಲಕವೇ ನಾನು ಮೊದಲ ಬಾರಿಗೆ ಶ್ರೀರಾಮಕೃಷ್ಣರ ಬಗ್ಗೆ ಕೇಳಿದ್ದೆ.'' ನಾನು ಹೇಳಿದೆ: ''ಅಂತೆಯೇ ಇವನು ನನ್ನನ್ನು ನಿಮ್ಮ ಬಳಿಗೆ ಕರೆದುಕೊಂಡು ಬಂದ.'' ಶ್ರೀಮಾತೆ ಇದನ್ನು ಕೇಳಿ ತುಂಬ ಆನಂದಗೊಂಡರು. ಅವರು ನನ್ನ ಸ್ನೇಹಿತನನ್ನು ಕರೆದು ಹೇಳಿದರು, ''ಒಳ್ಳೆಯದಾಯಿತು, ಅವನು ನಿನಗೆ ಉಪಕಾರ ಮಾಡಿದ, ನೀನೂ ಅವನಿಗೆ ಉಪಕಾರ ಮಾಡಿದೆ.''

ಶ್ರೀಮಾತೆಯವರ ಅಂಗೈ ಕೆಂಪುಬಣ್ಣದಿಂದ ಕೂಡಿತ್ತು. ಅದನ್ನು ನೋಡುವ ಸುಯೋಗ ಅನೇಕರಿಗೆ ಲಭಿಸಿತು. ಅವರ ಪಾದಗಳೂ ಅದೇ ರೀತಿ ಬೆಟ್ಟದಾವರೆಯಂತೆ ನಸುಗೆಂಪು ಬಣ್ಣ ; ದೀರ್ಘವಾದ ಕಡುಗಪ್ಪು ಬಣ್ಣದ ತಲೆಗೂದಲ ರಾಶಿ, ಸೂಕ್ಷ್ಮವಾದ ರೇಶ್ಮೆಯ ದಾರದಂತೆ ಉಜ್ವಲ ಹಾಗೂ ಮೃದುವಾಗಿತ್ತು; ಮುಂಭಾಗವು ತುಸು ಗುಂಗುರಾಗಿತ್ತು. ದೃಢವಾದ ಮುಖದಲ್ಲಿ ನೀಳ ನಾಸಿಕ — ಅಪೂರ್ವ ಶೋಭೆಯಿಂದ ಕೂಡಿತ್ತು. ಸ್ಥಿರ ಹಾಗೂ ಕೃಪೆಯಿಂದ ಕೂಡಿದ ಪ್ರಶಾಂತವಾದ ನೋಟ ಅವರದು. ಎಲ್ಲರ ಅಂತರಂಗದಲ್ಲಿ ಯಾವಾಗಲೂ ಕರುಣೆಯ ಮಳೆಯನ್ನೇ ಕರೆಯುವಂತಹ ನೋಟ. ಅವರ ನಸುಗಪ್ಪುನಿಂದ ಕೂಡಿದ ಗೌರವರ್ಣ ಮೊದಲು ಉಜ್ವಲವಾಗಿತ್ತು, ಇಳಿವಯಸ್ಸಿನಲ್ಲಿ ಮಸುಕಾಗಿಬಿಟ್ಟಿತ್ತು. ಅವರದು ನೀಳವಾದ ದೇಹಾಕೃತಿ. ಕೈಕಾಲುಗಳೂ ಇತರರಿಗೆ ಹೋಲಿಸಿದರೆ ನೀಳವಾಗಿದ್ದವು. ಎಡಭಾಗಕ್ಕೆ ತುಸು ವಾಲಿಕೊಂಡಂತೆ, ನಿಧಾನವಾಗಿ ನಡೆಯುತ್ತಿದ್ದರು. ಅನಂತರ ಅವರ ಮೊಣಕಾಲುಗಳಿಗೆ ಸಂಧಿವಾತವುಂಟಾಯಿತು.

ಶ್ರೀಮಾತೆಯವರಿಗೆ ತಮ್ಮ ಸಂನ್ಯಾಸಿ ಹಾಗೂ ಗೃಹಸ್ಥ ಶಿಷ್ಯರ ಮೇಲೆ ಒಂದೇ ರೀತಿಯ ಪ್ರೀತಿ, ವಾತ್ಸಲ್ಯಗಳಿದ್ದವು. ಗೃಹಸ್ಥ ಶಿಷ್ಯರು ಶ್ರೀಮಾತೆಯವರ ಬಳಿಗೆ ಬಂದಾಗ, ಶ್ರೀಮಾತೆ ತಮ್ಮ ಮೇಲೆ ಭೇದಭಾವ ಮಾಡುತ್ತಿದ್ದಾರೆ ಎಂದಾಗಲಿ, ತಮ್ಮ ಮೇಲೆ ಅವರ ಪ್ರೀತಿ, ವಾತ್ಸಲ್ಯಗಳು ಕಡಿಮೆಯಾಗಿದೆ ಎಂದಾಗಲಿ ಅವರಿಗೆ ಎಂದೂ ಅನ್ನಿಸುತ್ತಿರಲಿಲ್ಲ. ಶ್ರೀಮಾತೆಯವರು ಅವರ ಮೇಲೆ ತೋರಿಸುತ್ತಿದ್ದ ಸಹಾನುಭೂತಿ, ಅನುಕಂಪಗಳು ಅವರ ಜೀವನ ಯಾತ್ರೆಯ ನಡುವೆ ಕಾಣಿಸಿಕೊಳ್ಳುತ್ತಿದ್ದ ಕಷ್ಟಕಾರ್ಪಣ್ಯಗಳನ್ನು ಶಮನಗೊಳಿಸುತ್ತಿದ್ದವು; ಅವರ ಆನಂದ ಉತ್ಸಾಹಗಳನ್ನು ವೃದ್ಧಿಗೊಳಿಸುತ್ತಿದ್ದವು. ಶ್ರೀಮಾತೆಯವರು ಅನೇಕರ ಮನೆ-ಮಂದಿ, ಬಂಧುಜನರು, ಕೆಲಸಕಾರ್ಯಗಳು, ಅವರ ಸಾಂಸಾರಿಕ ಸ್ಥಿತಿಗತಿ ಇವೆಲ್ಲದರ ವಿವರಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ಅವರು ಏನಾದರೂ ಸಮಸ್ಯೆಗಳನ್ನು ಶ್ರೀಮಾತೆಯವರ ಮುಂದೆ ಹೇಳಿಕೊಂಡರೆ, ಅದನ್ನು ಅವರು ಗಮನವಿಟ್ಟು ಕೇಳಿ, ಅದಕ್ಕೆ ಏನು ಮಾಡಬೇಕು ಎಂದು ನಿರ್ದೇಶಿಸುತ್ತಿದ್ದರು; ತಕ್ಕುದಾದ ಉಪದೇಶ ನೀಡುತ್ತಿದ್ದರು.

ಶ್ರೀಮಾತೆಯವರಿಗೆ ಎಂಥ ತೀಕ್ಷ್ಣ ದೃಷ್ಟಿಯಿರುತ್ತಿತ್ತು ಎಂಬುದನ್ನು ನೆನಪಿಸಿಕೊಂಡರೆ ಆಶ್ಚರ್ಯವುಂಟಾಗುತ್ತದೆ. ಜಯರಾಮಬಾಟಿಗೆ ವಿಭಿನ್ನ ಅಂತಸ್ತಿನ ಜನಗಳು ಬಂದಾಗಲೆಲ್ಲ ಶ್ರೀಮಾತೆ ಅಡಿಗೆಯವಳಿಗೆ ಯಾರು ಏನು ಊಟ ಮಾಡುತ್ತಾರೆ, ಎಷ್ಟು ಊಟ ಮಾಡುತ್ತಾರೆ, ಎಷ್ಟು ಚಪಾತಿ ಬೇಕಾಗಬಹುದು ಎಂದೆಲ್ಲ ಹೇಳಿಕೊಟ್ಟು ಮಾಡಿಸುತ್ತಿದ್ದರು. ಆದ್ದರಿಂದಲೇ ಶ್ರೀಮಾತೆಯವರ ಮನೆಯಲ್ಲಿ ಅವರ ಬಳಿ ಕುಳಿತು ಊಟ ಮಾಡಿ ಹೋದ ಶಿಷ್ಯಂದಿರಿಗೆಲ್ಲ ಅಷ್ಟೊಂದು ತೃಪ್ತಿ! ಶ್ರೀರಾಮಕೃಷ್ಣರು ಹೇಳುತ್ತಿದ್ದರು: ''ಯಾವ ಮಗುವಿಗೆ ಎಷ್ಟು ಊಟ ಮಾಡಿಸಬೇಕೆಂಬುದು ತಾಯಿಗೆ ಚೆನ್ನಾಗಿ ಗೊತ್ತಿರುತ್ತದೆ.''

ಜಯರಾಮಬಾಟಿಯಲ್ಲಿ ನಾವು ನೋಡುತ್ತಿದ್ದೆವು, ಶ್ರೀಮಾತೆ ಎಲ್ಲ ಭಕ್ತರಿಗೂ ಬಡಿಸಿ ಊಟ ಮಾಡಿಸಿದ ಮೇಲೆ, ಭಕ್ತೆಯರೊಂದಿಗೆ ತಾವು ಕುಳಿತು ನಿಶ್ಚಿಂತೆಯಿಂದ ಊಟಮಾಡುತ್ತಿದ್ದರು. ಏನೋ ಕೆಲಸದ ನಿಮಿತ್ತ ಯಾವುದಾದರೂ ಶಿಷ್ಯ ಹೊರಗಡೆ ಹೋಗಬೇಕಾಗಿ ಬಂದರೆ, ಅವನು ಮರಳಿ ಬರುವ ತನಕ, ಎಷ್ಟೇ ಹೊತ್ತಾದರೂ ಆಗಲಿ, ಶ್ರೀಮಾತೆ ಅವನಿಗಾಗಿ ಕಾಯುತ್ತಿದ್ದರು. ಅವರು ರಸ್ತೆಯ ಕಡೆಗೆ ನೋಡುತ್ತ ನಿಂತಿರುತ್ತಿದ್ದರು. ಮುಂದಕ್ಕೆ ಹೋಗಿ ನಿಂತು, ''ಹುಡುಗ ಇಷ್ಟು ಹೊತ್ತಿನವರೆಗೂ ಊಟಮಾಡಲಿಲ್ಲ , ಪಾಪ ಅವನಿಗೆ ಹಸಿವಾದೀತು'' ಎನ್ನುತ್ತಿದ್ದರು.

ಆದರೆ 'ಉದ್ಬೋಧನ'ದಲ್ಲಿ ಇದೆಲ್ಲ ಕಷ್ಟದ ಕೆಲಸ. ಶಿಷ್ಯಂದಿರು ಊಟ ಮಾಡದೆ ಶ್ರೀಮಾತೆ ಊಟ ಮಾಡಲಾರರು. ಗುರುಗತಪ್ರಾಣರಾದ, ನಿಷ್ಠಾವಂತ ಭಕ್ತರಾದ ಸ್ವಾಮಿ ಶಾರದಾನಂದರು ತಮ್ಮ ಇಷ್ಟದೇವತೆಯಾದ ಶ್ರೀಮಾತೆಯವರು ಊಟ ಮಾಡುವ ಮೊದಲೇ ಹೇಗೆ ಊಟ ಮಾಡಿಯಾರು? ಆದ್ದರಿಂದ ಅಲ್ಲಿ

ಒಂದು ವ್ಯವಸ್ಥೆಯಾಗಿತ್ತು — ಶ್ರೀಮಾತೆ ಹೆಣ್ಣುಮಕ್ಕಳೊಂದಿಗೆ ಒಂದು ಕೋಣೆಯಲ್ಲಿ ಊಟಕ್ಕೆ ಕುಳಿತುಕೊಳ್ಳುವರು; ಶರತ್ ಮಹಾರಾಜ್ ಉಳಿದ ಶಿಷ್ಯಂದಿರೊಂದಿಗೆ ಇನ್ನೊಂದು ಕೋಣೆಯಲ್ಲಿ ಅದೇ ವೇಳೆಗೆ ಕುಳಿತುಕೊಳ್ಳುವರು. ಶ್ರೀಮಾತೆ ಹಳ್ಳಿ ಹೆಂಗಸು; ತಡವಾಗಿ ಊಟ ಮಾಡಿಯೇ ರೂಢಿ ಅವರಿಗೆ. ಆದ್ದರಿಂದ ಶರತ್ ಮಹಾರಾಜ್ ಕೂಡ ತಮ್ಮ ಉಳಿದಿದ್ದ ಕೆಲಸವನ್ನು ಮಾಡುತ್ತ ಮಾಡುತ್ತ ವೇಳೆಯಾಗಿಬಿಡುತ್ತಿತ್ತು! ಶ್ರೀರಾಮಕೃಷ್ಣರ ಪ್ರಸಾದವನ್ನು ಮೊದಲು ಶ್ರೀಮಾತೆಯವರ ಎಲೆಗೆ ಬಡಿಸುತ್ತಿದ್ದರು. ಶ್ರೀಮಾತೆ ಬೇಗನೆ ಒಂದಿಷ್ಟು ಪ್ರಸಾದವನ್ನು ಬಾಯಿಗೆ ಹಾಕಿಕೊಂಡು, ಶರತ್‌ಗಾಗಿ ಅದನ್ನು ಮಹಾಪ್ರಸಾದ ಮಾಡಿಬಿಡುತ್ತಿದ್ದರು. ಗೋಲಾಪ್ ಮಾ ಅದನ್ನು ಶರತ್ ಮಹಾರಾಜ್‌ರಿಗೆ ತಂದುಕೊಡುತ್ತಿದ್ದರು. ಶ್ರೀಮಾತೆಯವರ ಭಾಗ್ಯವಂತರಾದ ಸಹಚರರಿಗೆಲ್ಲ ಆ ಪ್ರಸಾದದಲ್ಲಿ ಒಂದು ಪಾಲು ಸಿಕ್ಕೇ ಸಿಗುತ್ತಿತ್ತು.

ಒಂದು ಸಲ ಜಯರಾಮಬಾಟಿಯಲ್ಲಿ ಶ್ರೀಮಾತೆಯವರ ಜನ್ಮದಿನದಂದು ಭಕ್ತರಿಗೆಲ್ಲ ಆಸೆಯಾಯಿತು — ಶ್ರೀಮಾತೆ ಮೊದಲು ಊಟ ಮಾಡಲಿ, ಆನಂತರ ಅವರ ಶಿಷ್ಯಂದಿರೆಲ್ಲ ಅವರ ಪ್ರಸಾದ ಸ್ವೀಕರಿಸಲಿ ಎಂದು. ಅವರಲ್ಲಿ ಒಬ್ಬನದು ∩ ಅತಿಯಾದ ಉತ್ಸಾಹ. ಅವನೇ ಮುಂದಡಿಯಿಟ್ಟು ಶ್ರೀಮಾತೆಯವರಿಗೆ ವಿಷಯವನ್ನೆಲ್ಲ ಹೇಳಿದ. ಶ್ರೀಮಾತೆ ಅಂದು ಅದಕ್ಕೆ ಏನನ್ನೂ ಪ್ರತಿಯಾಗಿ ಹೇಳಲಿಲ್ಲ ; ಮೌನವಾಗಿ ಸಮ್ಮತಿ ನೀಡಿದರು. ಶ್ರೀರಾಮಕೃಷ್ಣರ ನೈವೇದ್ಯವಾದ ಬಳಿಕ ಎಲ್ಲ ಖಾದ್ಯ ಪ್ರಸಾದಗಳನ್ನು ಒಂದು ತಟ್ಟೆಯಲ್ಲಿ ಜೋಡಿಸಿ, ಒಂದು ಆಸನದ ಮುಂದೆ ಅದನ್ನಿಟ್ಟು, ಶ್ರೀಮಾತೆಯನ್ನು ಊಟಕ್ಕೆ ಕರೆದಾಗ ಅವರು ನಿಧಾನವಾಗಿ ಯಂತ್ರ ಚಲಿಸುವಂತೆ ಬಂದು ಆಸನದಲ್ಲಿ ಕುಳಿತರು. ಕರುಣಾಪೂರ್ಣವಾದ ದೃಷ್ಟಿಯಿಂದ ಅವರು ತಟ್ಟೆಯಲ್ಲಿದ್ದ ಎಲ್ಲ ಪದಾರ್ಥಗಳನ್ನೂ ನೋಡಿದರು, ಎಲ್ಲವನ್ನೂ ಒಂದಿಷ್ಟು ಬಾಯಿಗೆ ಹಾಕಿಕೊಂಡರು. ಅನಂತರ ತಮ್ಮ ಮುಂದಿದ್ದ ಶಿಷ್ಯನ ಮುಖದತ್ತ ನೋಡಿ ಅತ್ಯಂತ ಕಾತರರಾಗಿ, ''ನನ್ನ ಮಕ್ಕಳು ಊಟ ಮಾಡುವ ಮೊದಲು ನನ್ನ ಗಂಟಲಲ್ಲಿ ಆಹಾರ ಇಳಿಯುತ್ತಿಲ್ಲ. ಬೇಗನೆ ಎಲ್ಲರಿಗೂ ಊಟಕ್ಕೆ ವ್ಯವಸ್ಥೆ ಮಾಡು'' ಎಂದರು. ಹಾಗೆ ಹೇಳಿದವರೇ, ಕೈಯನ್ನು ತೊಳೆದು ಎದ್ದುಬಿಟ್ಟರು. ತಮ್ಮ ಕೋಣೆಗೆ ಹೋಗಿ, ಬಾಗಿಲ ಬಳಿ ತಮ್ಮ ಮಕ್ಕಳು (ಶಿಷ್ಯಂದಿರು) ಊಟ ಮಾಡುವುದನ್ನು ನೋಡಲು ಕುಳಿತರು. ಎಲ್ಲ ವ್ಯವಸ್ಥೆಯನ್ನೂ ಸರಿಯಾಗಿ ಮಾಡಲಾಗಿತ್ತು; ಕೆಲವೇ ಕ್ಷಣಗಳಲ್ಲಿ ಅವರ ಶಿಷ್ಯಂದಿರೆಲ್ಲ ಊಟಕ್ಕೆ ಕುಳಿತರು. ಆಗ ಶ್ರೀಮಾತೆಯವರ ಜೀವಕ್ಕೆ ತಂಪೆರೆದಂತಾಯಿತು. ಯಾವ ಮೂರ್ಖ ಶಿಷ್ಯ ತಾನೇ ಮುಂದಾಗಿ ಶ್ರೀಮಾತೆಯವರನ್ನು ಮೊದಲೇ ಊಟ ಮಾಡುವಂತೆ ಒತ್ತಾಯಿಸಿ ಅವರನ್ನು ಒಪ್ಪಿಸಿದ್ದನೋ, ಹಾಗೂ ಅದರಿಂದ ಸಂತಸಗೊಂಡಿದ್ದನೋ, ಈಗ ಅವನಿಗೆ ಬೋಧೆಯುಂಟಾಯಿತು — ನಾನೆಂಥ ಕೆಲಸ ಮಾಡಿಬಿಟ್ಟೆ! ಎಂದು. ಈ ದಿನ ಶ್ರೀಮಾತೆಯವರಿಗೆ ಊಟವಿಲ್ಲದಂತೆ ಮಾಡಿಬಿಟ್ಟೆ! ಎಂದಿನಂತೆ ಶಿಷ್ಯಂದಿರ ಊಟಕ್ಕೆ ಮೊದಲೇ ವ್ಯವಸ್ಥೆ ಮಾಡಿ, ಅನಂತರ ಶ್ರೀಮಾತೆಯವರನ್ನೂ ಹೆಣ್ಣುಮಕ್ಕಳೊಂದಿಗೆ ಊಟಕ್ಕೆ ಕುಳ್ಳಿರಿಸಿದ್ದರೆ ಚೆನ್ನಾಗಿರುತ್ತಿತ್ತು. ಅವರು ನಿಶ್ಚಿಂತರಾಗಿ, ಶಾಂತವಾಗಿ ಊಟಮಾಡಿಬಿಡುತ್ತಿದ್ದರು. ಅಯ್ಯೋ! ನಾವೆಲ್ಲ ವೈಭವಕ್ಕೆ ದಾಸರು. ಅವರ ಈ ಮಾಧುರ್ಯಮಯವಾದ ಲೀಲೆಯನ್ನು ಅದು ಹೇಗೆ ತಿಳಿದೇವು? ನಾವು ಅವರಿಗೆ ದೇವತೆಯಂತೆ ಅಲಂಕಾರ ಮಾಡಿ, ಅವರ ಪೂಜೆ, ನೈವೇದ್ಯಗಳಿಗೆ ವ್ಯವಸ್ಥೆ ಮಾಡಿ ನಮ್ಮ ವೈಭವದ ಹಂಬಲವನ್ನು ತೀರಿಸಿಕೊಳ್ಳುತ್ತೇವೆ; ಆದರೆ ಅವರು ಎಲ್ಲ ವೈಭವವನ್ನೂ ಬಿಟ್ಟು ತಮ್ಮ ಶುದ್ಧ ಮಾಧುರ್ಯಮಯವಾದ ಮಾನವ ಶರೀರವನ್ನೂ ಧಾರಣೆ ಮಾಡಿದ್ದಾರೆ; ಅವರ ವಾತ್ಸಲ್ಯವೆಂಬ ಅಮೃತವನ್ನು ಕುಡಿಸುವ ಸಲುವಾಗಿ ಅವರು ನಮ್ಮ ತಾಯಿಯಾಗಿ ಬಂದಿದ್ದಾರೆ. ಇದನ್ನು ನಮಗೆ ನಂಬಲು, ಅರಿತುಕೊಳ್ಳಲು ಸಾಧ್ಯವಾಗಲಿಲ್ಲವೆ?

ಶ್ರೀಮಾತೆಯವರ ಸೂಕ್ಷ್ಮದೃಷ್ಟಿ ತಮ್ಮ ಶಿಷ್ಯಂದಿರ ಸುಖ, ಸಂತೋಷಗಳ ಕಡೆಗೇ ಇರುತ್ತಿತ್ತು. ತಮ್ಮ ಮಕ್ಕಳ ಒಣಗಿದ ಮುಖ, ದೀನವಾದ ಉಡುಗೆತೊಡುಗೆ, ಕ್ಷೀಣಿಸಿದ ದೇಹ ಇವನ್ನೆಲ್ಲ ನೋಡಲು ಶ್ರೀಮಾತೆಗೆ ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದಲೇ 'ಉದ್ಬೋಧನ'ದಲ್ಲಿ ಎಲ್ಲರಿಗೋಸ್ಕರ ಪ್ರತಿದಿನವೂ ಮೀನಿನ ವ್ಯವಸ್ಥೆಯಿರುತ್ತಿತ್ತು. ಏಕೆಂದರೆ, ಮೀನು ತಿನ್ನದಿದ್ದರೆ ಬಂಗಾಳಿ ಶಿಷ್ಯರಿಗೆ ಹೊಟ್ಟೆ ತುಂಬಲಾರದು. ಊಟವಾದ ನಂತರ ಎಲ್ಲರೂ ತಾಂಬೂಲ ತಿನ್ನುವರು; ಆದ್ದರಿಂದ ಶ್ರೀಮಾತೆ ತಾವೇ ತಾಂಬೂಲವನ್ನು ಅಣಿಗೊಳಿಸಿ, ಜೋಡಿಸಿ ಇಡುತ್ತಿದ್ದರು. ಯಾರಿಗೆ ತಾಂಬೂಲ ಹೆಚ್ಚು ಇಷ್ಟವೋ, ಅವರಿಗೆ ಹೆಚ್ಚು ಸಿಗುತ್ತಿತ್ತು. ಶಿಷ್ಯಂದಿರು ಬಾಯಿತುಂಬ ತಾಂಬೂಲ ಮೆಲ್ಲುವುದನ್ನು ಕಂಡು ಶ್ರೀಮಾತೆಯವರು ತುಂಬ ಖುಷಿಪಡುತಿದ್ದರು. ಅವರು ಅಂಚಿಲ್ಲದ ಪಂಚೆಯನ್ನು ಉಟ್ಟುಕೊಳ್ಳುವುದು ಶ್ರೀಮಾತೆಗೆ ಸ್ವಲ್ಪವೂ ಇಷ್ಟವಾಗುತ್ತಿರಲಿಲ್ಲ. ಅವರಿಗೆ ಭಕ್ತರು ಹಲವಾರು ತೆಳುವಾದ ಅಂಚಿನ ಬಟ್ಟೆಬರೆಗಳನ್ನು ತಂದುಕೊಡುತ್ತಿದ್ದರು. ಅವುಗಳನ್ನು ಅವರು ಹೆಚ್ಚಾಗಿ ಬಳಸುತ್ತಿರಲಿಲ್ಲ. ಅವನ್ನು ಶಿಷ್ಯರಿಗೆ ಧಾರಾಳವಾಗಿ ಕೊಡುತ್ತಿದ್ದರು. ಶಿಷ್ಯಂದಿರಲ್ಲಿ ಕೆಲವರು ಷೋಕಿಗಳು; ಅದನ್ನು ಶ್ರೀಮಾತೆ ಅರಿತಿದ್ದರು. ಅಂಥವರಿಗೆ ಅವರು ಸುಂದರವಾದ ಅಂಚಿರುವ ಬಟ್ಟೆಬರೆ ಕೊಡುತ್ತಿದ್ದರು. ದಪ್ಪನೆಯ ಅಂಚಿನ ಬಟ್ಟೆಯನ್ನು ಇಷ್ಟಪಡುವವರಿಗೆ ದಪ್ಪದ ಅಂಚಿನ ಬಟ್ಟೆ ಕೊಡುತ್ತಿದ್ದರು. ಕೆಲವರ ಬಟ್ಟೆಬರೆ ಬೇಗನೆ ಹರಿದುಹೋಗುವುದು; ಅವರಿಗೆ ಶ್ರೀಮಾತೆ ಹೆಚ್ಚು ಬಟ್ಟೆಗಳನ್ನು ಕೊಡುತ್ತಿದ್ದರು. ಊಟ, ತಿಂಡಿ ಇತ್ಯಾದಿ ಯಾರು ಹೇಗೆ ಬಯಸುತ್ತಿದ್ದರೋ, ಯಾರ ಹೊಟ್ಟೆಗೆ ಏನು ಹಿಡಿಸುತ್ತದೋ, ಅದಕ್ಕೆ ಅನುಸಾರವಾಗಿ ಶ್ರೀಮಾತೆ ಅವರಿಗೆ ನೀಡುತ್ತಿದ್ದರು.

'ಉದ್ಬೋಧನ'ದಲ್ಲಿ ವಾಸವಾಗಿದ್ದ ಸಂನ್ಯಾಸಿ, ಬ್ರಹ್ಮಚಾರಿಗಳು ಬೇರೆ ಬೇರೆ ಸ್ವಭಾವದವರು. ಆದರೆ ಅವರೆಲ್ಲರೂ ಶ್ರೀಮಾತೆ

---

∩ ಸ್ವತಃ ಲೇಖಕರು

ಯವರ ಶಿಷ್ಯರೇ; ಶ್ರೀಮಾತೆಯವರ ಪ್ರೀತಿಗೆ ಸಮಾನ ಅಧಿಕಾರಿಗಳು. ಅವರೆಲ್ಲರ ಊಟ, ಬಟ್ಟೆಬರೆ, ಸುಖ, ಅನುಕೂಲತೆಗಳ ಬಗ್ಗೆ ಶ್ರೀಮಾತೆ ವಿಶೇಷ ಕಾಳಜಿ ವಹಿಸುತ್ತಿದ್ದರು. ಈ ಸಂದರ್ಭದಲ್ಲಿ ನಡೆದ ಒಂದು ಘಟನೆ ನೆನಪಿಗೆ ಬರುತ್ತಿದೆ. 'ಉದ್ಬೋಧನ' ದಲ್ಲಿದ್ದ ಡಾಕ್ಟರ್ ಮಹಾರಾಜ್ (ಸ್ವಾಮಿ ಪೂರ್ಣಾನಂದಜಿ) ಒಂದೊಂದು ಸಲ ರಾತ್ರಿ ಹೊತ್ತು ಸರಿಯಾದ ಸಮಯಕ್ಕೆ ಊಟಕ್ಕೆ ಬರಲು ಸಾಧ್ಯವಾಗುತ್ತಿರಲಿಲ್ಲ , ಆದ್ದರಿಂದ ಕೆಲವೊಮ್ಮೆ ಬೈಗುಳವನ್ನು ಕೇಳಬೇಕಾಗುತ್ತಿತ್ತು. ಒಂದು ದಿನ ಅವರು ತುಂಬ ತಡಮಾಡಿ ಬಂದದ್ದರಿಂದ ಇನ್ನೂ ಹೆಚ್ಚು ಬೈಗುಳ ಕೇಳಬೇಕಾಯಿತು. ಶ್ರೀಮಾತೆ ಇದನ್ನು ಗಮನಿಸಿ, ಅವರನ್ನು ಪ್ರತ್ಯೇಕವಾಗಿ ಕರೆದು, ಅವರು ತಡವಾಗಿ ಬರಲು ಕಾರಣವೇನೆಂದು ಕೇಳಿದರು. ಶ್ರೀಮಾತೆಯವರ ಪ್ರೀತಿಯ ಸ್ಪರ್ಶಕ್ಕೆ ಕರಗಿಹೋದ ಸ್ವಾಮಿ ಪೂರ್ಣಾನಂದರು ಅಳತೊಡಗಿದರು. ಅನಂತರ ಹೇಳಿದರು, ''ರಾಜಾ ಮಹಾರಾಜ್ (ಸ್ವಾಮಿ ಬ್ರಹ್ಮಾನಂದರು) ಆದೇಶವಿತ್ತಿದ್ದಾರೆ — 'ಪ್ರತಿದಿನ ಹತ್ತು ಸಾವಿರ ಬಾರಿ ಜಪ ಮಾಡು, ಸರಿಯಾಗಿ ಲೆಕ್ಕ ಇಡು. ಮರೆತರೆ ಮತ್ತೆ ಮೊದಲಿನಿಂದ ಆರಂಭಿಸಬೇಕು. ಲೆಕ್ಕ ಇಡಲು ಮರೆತರೆ ಜಪದ ಫಲವನ್ನು ರಾಕ್ಷಸ ತಿಂದು ಹಾಕುತ್ತಾನೆ' ಎಂದಿದ್ದಾರೆ.'' ರಾಕ್ಷಸ ಜಪದ ಫಲವನ್ನು ತಿನ್ನುವ ಮಾತನ್ನು ಕೇಳಿ ಶ್ರೀಮಾತೆ ನಗತೊಡಗಿದರು. ಅನಂತರ ಹೇಳಿದರು, ''ಮಗು, ನೀವು ಇನ್ನೂ ಹುಡುಗರು, ಮನಸ್ಸು ಚಂಚಲ. ಏಕಾಗ್ರಚಿತ್ತದಿಂದ ಜಪ ಮಾಡುವುದಕ್ಕಾಗಿ ರಾಖಾಲ್ ಈ ರೀತಿ ಹೇಳಿದ್ದಾನೆ. ಮಗೂ, ನಾನು ಹೇಳುತ್ತಿದ್ದೇನೆ, ಊಟದ ಗಂಟೆ ಬಾರಿಸಿದಾಗ ನೀನು ಸರಿಯಾದ ಸಮಯಕ್ಕೆ ಊಟಕ್ಕೆ ಬಂದುಬಿಡು. ಜಪದ ಸಂಖ್ಯೆ ಪೂರ್ಣವಾಗದಿದ್ದರೂ ಅದರಿಂದ ದೋಷವಿಲ್ಲ. ಅನಂತರ ನಿನಗೆ ಅನುಕೂಲವಾದಾಗ ಜಪ ಮಾಡು'' ಎಂದರು. ಶ್ರೀಮಾತೆಯವರ ಭರವಸೆಯಿಂದ ಅವರ ಶಿಷ್ಯ ನಿರ್ಭೀತನಾಗಿ ಸಮಾಧಾನ ಹೊಂದಿದ, ಸಮಯಕ್ಕೆ ಸರಿಯಾಗಿ ಊಟಕ್ಕೆ ಬರತೊಡಗಿದ.

ಶ್ರೀಮಾತೆ ಪ್ರತಿದಿನ ಬೆಳಗಿನ ಪೂಜೆಯಾದ ಬಳಿಕ ಪ್ರಸಾದದಲ್ಲಿ ಇರುತ್ತಿದ್ದ ಕಲ್ಲುಸಕ್ಕರೆಯ ಶರಬತ್ತು ಒಂದಿಷ್ಟು ಕುಡಿಯುತ್ತಿದ್ದರು. ಇದು ಅವರ ಎಂದಿನ ಅಭ್ಯಾಸ. ಇದು ಬೆಳಗಿನ ಅವರ ಜಲಾಹಾರ — ಪಿತ್ತದಿಂದ ರಕ್ಷಣೆ. ಹೀಗೆ ಒಂದಿಷ್ಟು ಸ್ವೀಕರಿಸಿದ ನಂತರ ಅವರು ಶಿಷ್ಯಂದಿರಿಗೆ ತಿಂಡಿ ನೀಡುತ್ತಿದ್ದರು. ಜಯರಾಮಬಾಟಿಯಲ್ಲಿ ಅವರ ಅದೇ ಮಧುರವಾದ ಆಹ್ವಾನ ಕಿವಿಯಲ್ಲಿ ಕೇಳಿಸುತ್ತದೆ — ''ಮಗೂ, ಹೊತ್ತಾಯಿತು. ತಿಂಡಿ ಮಾಡಲು ಬಾರಪ್ಪಾ.'' ಈ ಕರೆ ಈಗಲೂ ನನ್ನ ಕಿವಿಯಲ್ಲಿ ಕೇಳಿಸಿದಂತಾಗಿ, ಜೀವ ವ್ಯಾಕುಲಗೊಂಡು ಮೇಲೆಕ್ಕೆದ್ದು ಬರುತ್ತದೆ. ಹಕ್ಕಿಯಾಗಿ ಅಲ್ಲಿಗೆ ಹಾರಿ ಹೋಗೋಣವೇ ಎಂದು ಅನ್ನಿಸುತ್ತದೆ — ಅದೇ ವರಾಂಡ, ಅಲ್ಲಿ ಆಸನ ಹರಡಿ, ಅದರ ಮುಂದೆ ನೀರಿನ ಲೋಟ, ತಟ್ಟೆಯಲ್ಲಿ ಕಡಲೆಪುರಿ ಮತ್ತು ಬೆಲ್ಲ , ಎಲೆಯಲ್ಲಿ ಪ್ರಸಾದದ ಹಣ್ಣು-ಸಿಹಿತಿಂಡಿ ಇವನ್ನು ಜೋಡಿಸಿ, ಬಾಗಿಲಿನತ್ತ ನೋಡುತ್ತ ಪ್ರೇಮಪೂರಿತ ದೃಷ್ಟಿ ಬೀರಿ ಶ್ರೀಮಾತೆ ಕುಳಿತಿದ್ದಾರೆ, 'ಕರುವಿನ ದಾರಿಯನ್ನೇ ನೋಡುತ್ತ ಗಂಭೀರವಾಗಿ ನಿಂತಿರುವ ದನದ ಹಾಗೆ'. ಆದರೆ ಇನ್ನು ಮೇಲೆ ಆ ಭಾಗ್ಯವಿಲ್ಲ. ಇಡೀ ವಿಶ್ವವನ್ನೇ ಸುತ್ತಾಡಿ ಅರಸಿದರೂ ಆ ಮಾತೃಪ್ರೇಮ ಸಿಗಲಾರದು. ಶಿಷ್ಯಂದಿರೆಲ್ಲ ತಿಂಡಿ ಮುಗಿಸಿದ ಮೇಲೆ, ಹೆಣ್ಣುಮಕ್ಕಳಿಗೆ ತಿಂಡಿ ಬಡಿಸಿಕೊಟ್ಟು, ಶ್ರೀಮಾತೆ ತಾವೂ ಒಂದಿಷ್ಟು ತಿನ್ನುತ್ತಿದ್ದರು. ಭಕ್ತರು ಹಣ್ಣು-ಸಿಹಿತಿಂಡಿಗಳನ್ನು ತಂದುಕೊಟ್ಟರೆ, ಅದನ್ನು ಇತರರಿಗೆ ಕೊಡುತ್ತಿದ್ದರು. ತಾವು ಒಂದಿಷ್ಟನ್ನು ಬಾಯಿಗೆ ಹಾಕಿಕೊಳ್ಳುತ್ತಿದ್ದರು ಅಷ್ಟೆ. ಒಂದು ಹಿಡಿ ಕಡಲೆಪುರಿಯಷ್ಟೇ ಅವರ ತಿಂಡಿ! ಅನಂತರದ ದಿನಗಳಲ್ಲಿ ಅವರ ಹಲ್ಲು ಬಿದ್ದು ಹೋಗಿ, ಅವರಿಗೆ ಮೆಲ್ಲುವುದು ಸಾಧ್ಯವಿಲ್ಲದೆ ಹೋಯಿತು. ಅದಕ್ಕೆ ಅವರು ಸೆರಗಿನಲ್ಲಿ ಒಂದಿಷ್ಟು ಕಡಲೆಪುರಿಯನ್ನು ಕಟ್ಟಿಕೊಂಡು, ಅದನ್ನು ದುಂಡನೆಯ ಕಲ್ಲಿನಿಂದ ಪುಡಿಮಾಡಿ ಇಟ್ಟುಕೊಳ್ಳುತ್ತಿದ್ದರು. ಅನಂತರ ನವಾಸನದ ಸೊಸೆಯನ್ನು[೨] ಕರೆದು, ''ನನ್ನ ಸೊಸೆ, ಒಂದಿಷ್ಟು ಉಪ್ಪು, ಖಾರ ಕೊಡಮ್ಮ'' ಎನ್ನುತ್ತಿದ್ದರು. *(ಮುಂದಿನ ಸಂಚಿಕೆಗೆ)*

---

೨ ನವಾಸನ ಎಂಬ ಪ್ರದೇಶದಿಂದ ಬಂದ ಹೆಣ್ಣುಮಗಳು; ಅವಳು ಶ್ರೀಮಾತೆಯವರ ಸೇವಕಿಯಾಗಿದ್ದಳು. ಅವಳನ್ನು ಶ್ರೀಮಾತೆಯವರು ಯಾವಾಗಲೂ 'ನವಾಸನದ ಸೊಸೆ' ಎಂದೇ ಕರೆಯುತ್ತಿದ್ದರು.


***Statement about ownership and other particulars about Viveka Prabha (according to Form IV Rule 8, circulated by Registrar of Newspapers for India)***

| | | |
|---|---|---|
| 1. Place of Publication | : | **Mysore 570 020** |
| 2. Periodicity of Publication | : | **Monthly** |
| 3. Printer's Name | : | **Swami Atmajnananda** |
| Nationality | : | **Indian** |
| Address | : | **Adhyaksha, Sri Ramakrishna Ashrama, Yadavagiri, Mysore 570 020** |
| 4. Publisher's Name | : | **Swami Atmajnananda** |
| Nationality | : | **Indian** |
| Address | : | **Adhyaksha, Sri Ramakrishna Ashrama, Yadavagiri, Mysore 570 020** |
| 5. Editor's Name | : | **Swami Jnanayogananda** |
| Nationality | : | **Indian** |
| Address | : | **Sri Ramakrishna Ashrama Yadavagiri Mysore 570 020** |
| 6. Name & Addresses of the individuals who own the newspaper and partners or share-holders holding more than 1% of the capital | : | **Adhyaksha, Sri Ramakrishna Ashrama, Yadavagiri Mysore 570 020** |

**I, Swami Atmajnananda, hereby declare that the particulars given above are true to the best of my knowledge and belief.**

*sd.*
*Swami Atmajnananda*
01.03.2019 Signature of the publisher



# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

## ಭಾಗ ೨೬

ಶ್ರೀರಾಮಕೃಷ್ಣರ ಸಂನ್ಯಾಸಿ ಶಿಷ್ಯರಲ್ಲೊಬ್ಬರಾದ ಸ್ವಾಮಿ ಅದ್ಭುತಾನಂದರು ೧೯೨೦ರ ಏಪ್ರಿಲ್ ೨೪ರಂದು ಕಾಶಿಯಲ್ಲಿ ತಮ್ಮ ಶರೀರವನ್ನು ತ್ಯಜಿಸಿದರೆಂಬ ಸುದ್ದಿ ಬಂತು. ಇಪ್ಪತ್ತು ವರ್ಷಗಳ ನಂತರ 'ಶ್ರೀ ಶ್ರೀ ಲಾಟು ಮಹಾರಾಜೇರ್ ಸ್ಮೃತಿಕಥಾ' (ಚಂದ್ರಶೇಖರ ಚಟ್ಟೋಪಾಧ್ಯಾಯರಿಂದ ಸಂಕಲಿತ) ಎಂಬ ಪುಸ್ತಕದ ಮುನ್ನುಡಿಯಲ್ಲಿ ವಿರಜಾನಂದರು ಹೀಗೆ ಬರೆದಿದ್ದಾರೆ: ''ಮಠವು ವರಾಹನಗರ ಹಾಗೂ ಆಲಂಬಜಾರಿನಲ್ಲಿದ್ದಾಗ ಅವರ (ಅದ್ಭುತಾನಂದರ) ಜ್ವಲಂತ ವೈರಾಗ್ಯವನ್ನೂ, ಧ್ಯಾನ ಪ್ರವಣತೆಯನ್ನೂ ಕಣ್ಣಾರೆ ಕಾಣುವ ಸೌಭಾಗ್ಯ ನನ್ನದಾಗಿತ್ತು. ಮೊದಮೊದಲು ಹೊರನೋಟಕ್ಕೆ ಅವರು ನಿಷ್ಕ್ರಿಯರು, ಒರಟರು ಮತ್ತು ವಿಚಿತ್ರ ಸ್ವಭಾವದವರು ಎಂದೆನಿಸಿತ್ತು. ಸ್ವಲ್ಪ ಸೂಕ್ಷ್ಮವಾಗಿ ಅವರ ಜೀವನವನ್ನು ಅವಲೋಕಿಸಿದಾಗ ಜಗತ್ತಿನ ಬಗೆಗೆ ಅವರಿಗೆಂತಹ ವೈರಾಗ್ಯವಿತ್ತೆಂಬುದು ಅರಿವಾಗುತ್ತಿತ್ತು. ಸದಾ ಅವರ ಆಂತರ್ಯವು ಭಗವದ್ಭಾವದಲ್ಲಿ ತುಂಬಿ ಹೋಗಿರುತ್ತಿತ್ತು. ಅವರ ಜೀವನ ಅತ್ಯಂತ ಕಠೋರವಾಗಿತ್ತು. ಆಹಾರದ ಕಡೆಗಾಗಲಿ, ಶರೀರದ ಆರಾಮಕ್ಕಾಗಲಿ ಅವರಿಗೆ ಗಮನ ಕೊಡಲಾಗುತ್ತಿರಲಿಲ್ಲ. ಜಗತ್ತಿನ ವಿಧಿ-ನಿಷೇಧಗಳು ಅವರನ್ನು ಮುಟ್ಟುತ್ತಿರಲಿಲ್ಲ. ಕೋಲಾಹಲದ ನಡುವೆ ಇದ್ದರೂ ಸರ್ವದಾ ಅವರ ಮನಸ್ಸು ದೂರದ ಯಾವುದೋ ಒಂದು ಅತೀಂದ್ರಿಯ ರಾಜ್ಯದಲ್ಲಿ ತಿರುಗಾಡುವಂತಿತ್ತು.''

ಇಷ್ಟರಲ್ಲಿ ವಿರಜಾನಂದರಿಗೆ ಕೊಲ್ಕತ್ತೆಯ ಪತ್ರದಿಂದ ಶ್ರೀಮಾತೆಯವರ ದೇಹಾರೋಗ್ಯ ದಿನದಿಂದ ದಿನಕ್ಕೆ ಹದಗೆಡುತ್ತಿದೆ ಎಂಬುದಾಗಿ ತಿಳಿದುಬಂತು. ಕಾಳೀಕೃಷ್ಣರು ತುಂಬ ಆತಂಕದಲ್ಲಿ ದಿನಗಳನ್ನು ಕಳೆಯಲಾರಂಭಿಸಿದರು. ಜುಲೈ ೪ ವಿವೇಕಾನಂದರ ತಿರೋಧಾನದ ದಿವಸ. ಆ ದಿವಸವನ್ನು ವಿರಜಾನಂದರು ಜಪ-ಧ್ಯಾನ, ಪೂಜೆ-ಪುನಸ್ಕಾರಗಳಲ್ಲಿ ಕಳೆದರು. ಜುಲೈ ೨೧ರಂದು (೧೯೨೦) ಶ್ರೀಮಾತೆಯವರು ರಾತ್ರಿ ಒಂದೂವರೆ ಗಂಟೆಗೆ ತಮ್ಮ ಇಹಲೋಕದ ಲೀಲೆಯನ್ನು ಮುಗಿಸಿ, ಮಹಾಸಮಾಧಿಯನ್ನು ಹೊಂದಿದರೆಂಬ ದಾರುಣ ವಾರ್ತೆಯು ಜುಲೈ ೨೯ರಂದು ತಿಳಿದು ಬಂತು. ಎಲ್ಲದಕ್ಕೂ ಶ್ರೀಮಾತೆಯವರನ್ನೇ ನಂಬಿದ್ದ, ಮಾತೃಗತ ಪ್ರಾಣರಾಗಿದ್ದ ವಿರಜಾನಂದರಿಗೆ ಈ ಆಘಾತವು ಅದೆಷ್ಟು ಅಸಹನೀಯವಾಗಿದ್ದಿರಬಹುದೆಂಬುದನ್ನು ಸಹಜವಾಗಿಯೇ ಕಲ್ಪಿಸಿಕೊಳ್ಳಬಹುದು. ಹಿಮಾಲಯದ ಆ ಸ್ತಬ್ಧ, ಏಕಾಂತ ವಾತಾವರಣದಲ್ಲಿ ತಮ್ಮ ಆಂತರ್ಯದ ವೇದನೆಯನ್ನು ಏಕಾಂಗಿಯಾಗಿಯೇ ಸಹಿಸಿಕೊಂಡರು. ಜುಲೈ ೩೧ರಂದು (ದೇಹತ್ಯಾಗ ನಂತರದ ೧೧ನೇ ದಿನ) ಪೂಜೆ ಹಾಗೂ ಬ್ರಾಹ್ಮಣರಿಗೆ ಭೋಜನ ಮಾಡಿಸುವುದರ ಮೂಲಕ ಶ್ರೀಮಾತೆಯವರಿಗೆ ತಮ್ಮ ಸ್ಮೃತಿತರ್ಪಣವನ್ನು ನೀಡಿದರು. ಅದೇ ವರ್ಷ ಡಿಸೆಂಬರ್ ೩೧ರಂದು ಶ್ರೀಮಾತೆಯವರ (೬೭ನೇ) ಜನ್ಮತಿಥಿ. ಅದನ್ನೂ ಸಹ ವಿಶೇಷ ಪೂಜೆ, ನೈವೇದ್ಯ, ಸ್ಮರಣ ಮನನಗಳ ಮೂಲಕ ಆಚರಿಸಿದರು. ಶ್ರೀಮಾತೆಯವರನ್ನು ಮೊದಲ ಬಾರಿ ಕಂಡಾಗಿನ ತಮ್ಮ ಮನೋಭಾವವನ್ನು ಸ್ವಾಮಿ ವಿರಜಾನಂದರು ಹೀಗೆ ವರ್ಣಿಸಿದ್ದಾರೆ:



''...ಶ್ರೀಮಾತೆಯವರು ನಮ್ಮ ಮನಸ್ಸನ್ನು ಒಮ್ಮೆಗೇ ಸೆಳೆದುಕೊಂಡು, ತಮ್ಮದನ್ನಾಗಿಸಿಕೊಳ್ಳುವಂತಹ ಅದ್ಭುತ ಶಕ್ತಿಯುಳ್ಳವರು. ಅವರ ಬಗ್ಗೆ ಏನೋ ಸ್ವಲ್ಪ ಕೇಳಿ, ಅಷ್ಟರಿಂದಲೇ ಅವರು ಎಂಥವರೆಂಬುದನ್ನು ಕಲ್ಪಿಸಿಕೊಳ್ಳಲು ಸಾಧ್ಯವೆ? ತಂದೆಯನ್ನಂತೂ ಕಂಡಿಲ್ಲ , (ಶ್ರೀರಾಮಕೃಷ್ಣರನ್ನು ಕಂಡಿಲ್ಲ.) ಇಂಥ ತಾಯಿಯನ್ನಾದರೂ ಪಡೆದೆನಲ್ಲ! ಗುಣಹೀನ ಅಧಮ ನಾದ ಮಗುವಿನ ಬಗೆಗೂ ಅಹೈತುಕ ಪ್ರೀತಿ, ಅಹೈತುಕ ಕೃಪೆ!! ಯಾರಿಗೆ ಆ ಕೃಪೆ ದೊರೆತಿಲ್ಲವೋ, ಯಾರು ತಾಯಿಯವರನ್ನು ಕಂಡಿಲ್ಲವೋ ಅವರು ಅರ್ಥ ಮಾಡಿಕೊಳ್ಳಲಾರರು.''

### ೧೫

ಅಮೇರಿಕೆಯಲ್ಲಿ ೨೫ ವರ್ಷಗಳ ಕಾಲ ಪ್ರಚಾರ ಕಾರ್ಯವನ್ನು ಮಾಡಿದ್ದ ಸ್ವಾಮಿ ಅಭೇದಾನಂದರು ಇಲ್ಲಿಯೇ ನೆಲೆಸಲೆಂದು ಭಾರತಕ್ಕೆ ಹಿಂತಿರುಗಿದ್ದರು. ಅವರು ೧೮೯೬ರಲ್ಲಿ ಸ್ವಾಮೀಜಿಯವರ ಆಹ್ವಾನದ ಮೇರೆಗೆ ಪಾಶ್ಚಾತ್ಯ ದೇಶಗಳಿಗೆ ಹೋಗಿದ್ದರು. ೧೯೦೬ರಲ್ಲಿ ಒಮ್ಮೆ ಭಾರತಕ್ಕೆ ಭೇಟಿ ಇತ್ತಿದ್ದರು. ವಿರಜಾನಂದರಿಗೆ ಈಗ ಬೇಲೂರು ಮಠಕ್ಕೆ ಹೋಗಿ ಅಭೇದಾನಂದರನ್ನು ನೋಡಿಕೊಂಡು ಬರಬೇಕೆಂದೆನಿಸಿತು. ರಾಜಾ ಮಹಾರಾಜರನ್ನೂ, ಹರಿ ಮಹಾರಾಜರನ್ನೂ ಸಹ ನೋಡಲು ಅವರ ಮನಸ್ಸು ತವಕಿಸಿತು. ಇದಲ್ಲದೆ ವಿರಜಾನಂದರು ಹಳೆಯ ಟ್ರಸ್ಟಿಯಾದ್ದರಿಂದ, ಮಠ ಹಾಗೂ ಮಿಷನ್ನಿನ ಟ್ರಸ್ಟ್ ಹಾಗೂ ಗವರ್ನಿಂಗ್‌ಬಾಡಿ

ಮೀಟಿಂಗ್ ನಲ್ಲಿ ಕೆಲವು ಗಹನ ವಿಚಾರಗಳನ್ನು ಚರ್ಚಿಸಲೆಂದು ಶರತ್ ಮಹಾ ರಾಜರು ಇವರನ್ನು ಕರೆದಿದ್ದರು.

೧೯೨೧ರ ನವೆಂಬರ್‌ನಲ್ಲಿ ವಿರಜಾನಂದರು ಬೃಂದಾವನ ಹಾಗೂ ಅಲಹಾಬಾದ್ ನೋಡಿಕೊಂಡು ಕಾಶಿಗೆ ಬಂದರು. ಅಲ್ಲಿ ಹರಿ ಮಹಾರಾಜರ ಆರೋಗ್ಯ ಸ್ವಲ್ಪ ಸುಧಾರಿಸಿದ್ದನ್ನು ಕಂಡು ಸಂತೋಷಗೊಂಡರು. ಆದರೆ ಆಗ ಅವರು ಕನಸಿನಲ್ಲಾದರೂ ನೆನೆದಿದ್ದರೇ ಇನ್ನೇಳು ತಿಂಗಳುಗಳಲ್ಲೇ ತಮ್ಮ ಶರೀರತ್ಯಾಗ ಮಾಡುವರೆಂದು? ದಿನವೂ ಸಂಜೆ ಹರಿ ಮಹಾರಾಜರು ಇರುವಲ್ಲಿ ಶ್ರೀಮದ್ಭಾಗವತ ವಾಚನವು ನಡೆಯುತ್ತಿತ್ತು. ಸ್ವಾಮಿ ಕಮಲೇಶ್ವರಾನಂದರು ಅದನ್ನು ವಾಚಿಸುತ್ತಿದ್ದರು. ಹರಿ ಮಹಾರಾಜರು ಮಧ್ಯೆ ಮಧ್ಯೆ ವಿವರಿಸುತ್ತಿದ್ದರು. ಅಲ್ಲಿಯ ಎರಡು ಆಶ್ರಮಗಳಿಂದಲೂ ಸಾಧುಗಳು ಬಂದು ಸೇರುತ್ತಿದ್ದರು. ಅದೆಂತಹ ಅದ್ಭುತವಾದ ಆಧ್ಯಾತ್ಮಿಕ ಪರಿಸರ ಅಲ್ಲಿ ಏರ್ಪಡುತ್ತಿತ್ತು! ಜ್ಞಾನ, ಭಕ್ತಿಯ ಜ್ವಲಂತ ಮೂರ್ತಿಯಾದ ಜೀವನ್ಮುಕ್ತ ಮಹಾಪುರುಷರ ಸನ್ನಿಧಿಯಲ್ಲಿ ಭಾಗವತವು ಜೀವ ತಳೆದು, ಶ್ರೋತೃವೃಂದದ ಹೃದಯವನ್ನು ಸ್ಪರ್ಶಿಸುತ್ತಿತ್ತು. ವಿರಜಾನಂದರೂ ಒಂದು ದಿನ ವಾಚನವನ್ನು ಕೇಳಿ ತುಂಬಾ ಸಂತೋಷಪಟ್ಟರು.

ಅನಂತರ ಕಾಶಿಯಿಂದ ಗಯೆಗೆ ಬಂದರು. ಗಯೆಯ ಬ್ರಹ್ಮಯೋಗಿ ಪರ್ವತದ ಹತ್ತಿರ ಪರಮಾನಂದರು[೧] ಒಂದು ಆಶ್ರಮವನ್ನು ಮಾಡಿಕೊಂಡಿದ್ದರು. ಅದನ್ನು ನೋಡಿಕೊಂಡು ಹೋಗಬೇಕೆಂದು ವಿರಜಾನಂದರಿಗೆ ಮತ್ತೆ ಮತ್ತೆ ವಿನಂತಿಸಿಕೊಂಡಿದ್ದರು. ವಿರಜಾನಂದರು ಆಶ್ರಮವನ್ನು ಸಂದರ್ಶಿಸಿ ಸಂತಸಗೊಂಡರು.

ಡಿಸೆಂಬರ್ ೨, ೧೯೨೧ರಂದು ವಿರಜಾನಂದರು ಬೇಲೂರು ಮಠ ತಲುಪಿದರು. ಅಂದೇ ಸಂಜೆ ಕೊಲ್ಕತ್ತದ ಯೂನಿವರ್ಸಿಟಿ ಇನ್‌ಸ್ಟಿಟ್ಯೂಟ್‌ನಲ್ಲಿ ಸ್ವಾಮಿ ಅಭೇದಾನಂದರಿಗೆ 'ಸ್ವಾಗತ ಸಮಾರಂಭ' (Reception) ಏರ್ಪಟ್ಟಿತ್ತು. ಬಹಳ ವರ್ಷಗಳ ನಂತರ ಅಭೇದಾನಂದರೊಂದಿಗೆ ಭೇಟಿಯಾದದ್ದಕ್ಕೆ ವಿರಜಾನಂದರಿಗಂತೂ ಬಹಳ ಸಂತೋಷವಾಯಿತು. ಆ ಸಮಯದಲ್ಲಿ ರಾಜಾ ಮಹಾರಾಜರು ಹಾಗೂ ಮಹಾಪುರುಷ ಮಹಾರಾಜರು ಭುವನೇಶ್ವರದಲ್ಲಿದ್ದರು. ಸ್ವಲ್ಪ ದಿನಗಳಲ್ಲೇ ಅವರೂ ಮಠಕ್ಕೆ ಹಿಂತಿರುಗುವವರಿದ್ದರು. ಡಿಸೆಂಬರ್ ೪ ರಂದು ವಿದ್ಯಾರ್ಥಿ ಸಮುದಾಯದಿಂದಲೂ ಸ್ವಾಮಿ ಅಭೇದಾನಂದರಿಗೆ ಸ್ವಾಗತ ಸಮಾರಂಭವಿತ್ತು. ವಿರಜಾನಂದರೂ ಸಹ ಉಪಸ್ಥಿತರಿದ್ದರು. ಶ್ರೀರಾಮಕೃಷ್ಣರ ಪರಮ ಭಕ್ತರಾದ ಡಾ. ಬಿಪಿನ್ ಚಂದ್ರ ಘೋಷರ ಮನೆಯಲ್ಲಿ ಒಂದು ದಿನ ಎಲ್ಲ ಸಂನ್ಯಾಸಿಗಳಿಗೂ ಔತಣವನ್ನು ಏರ್ಪಡಿಸಿದ್ದರು. ವಿರಜಾನಂದರೂ ಅಲ್ಲಿಗೆ ಹೋಗಿದ್ದರು.

ಡಾ. ಜಗದೀಶ್ ಚಂದ್ರ ಬೋಸ್ ತಮ್ಮ ಪತ್ನಿಯೊಂದಿಗೆ ಅನೇಕ ಬಾರಿ ಮಾಯಾವತಿಯಲ್ಲಿ ತಂಗುತ್ತಿದ್ದುದರಿಂದ, ವಿರಜಾನಂದರೊಂದಿಗೆ ಚೆನ್ನಾಗಿಯೇ ಪರಿಚಯವಾಗಿತ್ತು. ಅವರು ಮತ್ತು ಅವರ ಪತ್ನಿ ಲೇಡಿ ಅಬಲಾ ಬಸು ಇಬ್ಬರೂ ವಿರಜಾನಂದರನ್ನು ಬಹಳ ಗೌರವದಿಂದ ಕಾಣುತ್ತಿದ್ದರು. ಕೊಲ್ಕತ್ತಕ್ಕೆ ಬಂದಾಗಲೆಲ್ಲ ವಿರಜಾನಂದರು ಅವರಿಬ್ಬರನ್ನೂ ಭೇಟಿಯಾಗಿ ಬರುತ್ತಿದ್ದರು. ಈ ಬಾರಿಯೂ ಸಹ ಡಾ. ಬೋಸ್ ವಿರಜಾನಂದರನ್ನು ತಮ್ಮ ಮನೆಗೆ ಆಹ್ವಾನಿಸಿದ್ದರು. ವಿರಜಾನಂದರು ಶಂಕರಾನಂದರೊಡಗೂಡಿ ಅವರ ಆತಿಥ್ಯ ಸ್ವೀಕರಿಸಿ ಬಂದರು.

ಡಿಸೆಂಬರ್ ೨೦ರಂದು ಶ್ರೀಶಾರದಾದೇವಿಯವರ ಶುಭ ಜನ್ಮತಿಥಿ. ಅವರ ದಿವ್ಯದೇಹ ದಹನವಾದ ಸ್ಥಳದಲ್ಲಿ ಕಟ್ಟಿದ್ದ ಸಮಾಧಿ ಮಂದಿರದ ಉದ್ಘಾಟನೆಯನ್ನು ಅಂದು ನೆರವೇರಿಸಲಾಯಿತು. ಕೆಲವು ದಿನಗಳ ಹಿಂದೆಯೇ ಅಲಹಾಬಾದಿನಿಂದ ಸ್ವಾಮಿ ವಿಜ್ಞಾನಾನಂದರು ಬೇಲೂರು ಮಠಕ್ಕೆ ಬಂದಿದ್ದರು. ೨೫ರಂದು ಏಸುಕ್ರಿಸ್ತನ ಜನ್ಮದಿನವನ್ನು ವಿಜೃಂಭಣೆಯಿಂದ ಆಚರಿಸಲಾಯಿತು. ಅಂದು ಅಭೇದಾನಂದರು ತಮ್ಮ ಭಾಷಣವನ್ನು ಓದಿದರು. ಮತ್ತೊಂದು ದಿನ ಸ್ವಾಮಿ ಅಭೇದಾನಂದರು ವಿರಜಾನಂದ ಹಾಗೂ ಮತ್ತಿತರರನ್ನು ಕರೆದುಕೊಂಡು ವಿಕ್ಟೋರಿಯಾ ಮೆಮೋರಿಯಲ್ ನೋಡಿಕೊಂಡು ಬಂದರು. ಇನ್ನೊಂದು ದಿನ 'ಪ್ರಫುಲ್ಲ' ಮತ್ತು 'ಆಲಿಬಾಬಾ' ನಾಟಕವನ್ನು ನೋಡಿಕೊಂಡು ಬಂದರು. ಅಭೇದಾನಂದರೊಡನೆ ಈ ರೀತಿಯ ಸುತ್ತಾಟವು ವಿರಜಾನಂದರಿಗೆ ಆಹ್ಲಾದವನ್ನುಂಟುಮಾಡಿತು.

೧೯೨೨ರ ಜನವರಿ ೧೨ರಂದು ಪೂಜ್ಯರಾದ ಸ್ವಾಮಿ ಬ್ರಹ್ಮಾನಂದರು ಮತ್ತು ಸ್ವಾಮಿ ಶಿವಾನಂದರು ಭುವನೇಶ್ವರದಿಂದ ಬೇಲೂರು ಮಠಕ್ಕೆ ಹಿಂತಿರುಗಿ ಬಂದರು. ಇವರ ಆಗಮನದಿಂದ ಮಠದಲ್ಲಿ ಆನಂದದ ಹೊಳೆಯೇ ಉಕ್ಕಿ ಹರಿದಂತಿತ್ತು. ೧೯ರಂದು ಸ್ವಾಮೀಜಿಯವರ ಶುಭಜನ್ಮತಿಥಿ. ಅಂದಿನ ಉತ್ಸವದಲ್ಲಿ ಸುಮಾರು ೮,೦೦೦ ಮಂದಿ ಸ್ತ್ರೀಪುರುಷರು ಭಾಗವಹಿಸಿದ್ದರು. ನಾಲ್ಕು ಸಾವಿರ ಭಕ್ತರಿಗೆ ಹಾಗೂ ನರನಾರಾಯಣರಿಗೆ ಊಟ ಹಾಕಲಾಯಿತು. ಸ್ವಾಮೀಜಿಯವರ ಉತ್ಸವವು ಈ ರೀತಿ ಬೃಹತ್ ಪ್ರಮಾಣದಲ್ಲಿ ಜರುಗಿದ್ದನ್ನು ಕಂಡು ವಿರಜಾನಂದರು ತುಂಬಾ ಆನಂದಪಟ್ಟರು.

ಜನವರಿ ೩೦ರಂದು ಸ್ವಾಮಿ ಬ್ರಹ್ಮಾನಂದರ ಜನ್ಮದಿನವಾದ್ದರಿಂದ ಸಂನ್ಯಾಸಿಗಳು ಮತ್ತು ಭಕ್ತರು ಅಂದು ಆನಂದೋತ್ಸವವನ್ನು ಆಚರಿಸಿದರು. ಹೊಸ ರೇಷ್ಮೆಯ ಗೈರಿಕ ವಸ್ತ್ರ ಹಾಗೂ ಉತ್ತರೀಯವನ್ನು ಉಡಿಸಿ, ಕೊರಳಿಗೆ ಹೂವಿನ ಮಾಲೆಯನ್ನು ಹಾಕಿದ್ದರು. ಅಬ್ಬಾ! ನೋಡಲು ಕಣ್ಣಿಗೆ ಹಬ್ಬ! ವಿರಜಾನಂದರ ಆನಂದಕ್ಕೆ

---

೧ ವಿರಜಾನಂದರು ಮಾಯಾವತಿಯಲ್ಲಿದ್ದಾಗ ಈ ಪರಮಾನಂದರೂ ಸಹ ಅಲ್ಲಿ ಸೇವೆ ಸಲ್ಲಿಸುತ್ತಿದ್ದರು. ಇವರು ರಾಜಾ ಮಹಾರಾಜರಿಂದ ದೀಕ್ಷೆ ಪಡೆದಿದ್ದರು. ಪೂರ್ವಾಶ್ರಮದ ಸಂಬಂಧದ ಪ್ರಕಾರ ವಿರಜಾನಂದರ ಸೋದರಿಯ ಮಗ. ಆದರೆ ನ್ಯಾಂಗ್ಟಾ ಬಾಬಾ ಎಂಬ ಬೇರೆ ಸಂಪ್ರದಾಯದ ಸಾಧುಗಳೊಬ್ಬರಿಂದ ಸಂನ್ಯಾಸವನ್ನು ಸ್ವೀಕರಿಸಿದ್ದರು. ವಿರಜಾನಂದರನ್ನು ಕಂಡರೆ ಇವರಿಗೆ ಅಪಾರ ಪ್ರೀತಿ, ಶ್ರದ್ಧೆಗಳಿದ್ದವು. ಅನಂತರದಲ್ಲಿ ಇವರು ಶ್ಯಾಮಲಾತಾಲ್ ಆಶ್ರಮದ ಹತ್ತಿರ ಒಂದು ಆಶ್ರಮವನ್ನು ಕಟ್ಟಿಕೊಂಡು, ಕೆಲವು ಕಾಲ ಅಲ್ಲಿ ಒಬ್ಬಂಟಿಯಾಗಿ ತಪಸ್ಸಿನಲ್ಲಿ ನಿರತರಾಗಿದ್ದರು.

ಪಾರವೇ ಇರಲಿಲ್ಲ. ಅಂತರ್ಯದಿಂದ ಉದಿಸಿದ ಆಳವಾದ ಶ್ರದ್ಧೆಯೊಡನೆ ಮಠಾಧ್ಯಕ್ಷರ ಪಾದಕ್ಕೆರಗಿದರು. ಶ್ರೀರಾಮಕೃಷ್ಣರ ಇಚ್ಛೆಯಂತೆ ಹದಿನಾರು ವರ್ಷಗಳ ನಂತರ ತಾವೂ ಸಹ ಒಂದು ದಿನ ಈ ಗೌರವಾನ್ವಿತ ಆಸನದಲ್ಲಿ ಕುಳಿತುಕೊಳ್ಳಬೇಕಾಗುತ್ತದೆ ಎಂಬುದನ್ನು ಅವರು ಕನಸಿನಲ್ಲಾದರೂ ಭಾವಿಸಿದ್ದರೇನು?

ಯಾವ ಯಾವ ಮಹತ್ವಪೂರ್ಣ ವಿಷಯಗಳನ್ನು ಮಠದ ಟ್ರಸ್ಟಿಗಳೊಡನೆ ಚರ್ಚಿಸಿ ನಿರ್ಧಾರಕ್ಕೆ ಬರಬೇಕೆಂದುಕೊಂಡು ಶಾರದಾನಂದರು ವಿರಜಾನಂದರನ್ನು ಕರೆದಿದ್ದರೋ ಆ ವಿಷಯಗಳನ್ನು ಕೆಲವು ಸಭೆಗಳನ್ನು ನಡೆಸುವುದರ ಮೂಲಕ ನಿರ್ಣಯಿಸಲಾಗಿತ್ತು; ಸ್ವಾಮಿ ಅಭೇದಾನಂದರನ್ನು ಮಠ ಹಾಗೂ ಮಿಷನ್ನಿನ ಸಹಸಂಘಾಧ್ಯಕ್ಷರನ್ನಾಗಿ ಚುನಾಯಿಸಲಾಗಿತ್ತು. ಅಲ್ಲದೆ ನಾಲ್ಕಾರು ಸಂನ್ಯಾಸಿಗಳನ್ನು ಹೊಸದಾಗಿ ಟ್ರಸ್ಟಿಗಳನ್ನಾಗಿ ಮಾಡಲಾಯಿತು. ಸ್ವಾಮಿ ವಿಶುದ್ಧಾನಂದರು ಹಾಗೂ ಸ್ವಾಮಿ ಮಾಧವಾನಂದರು ಅವರಲ್ಲಿಬ್ಬರು.

ಮಾರ್ಚ್ ೫ರಂದು ಶ್ರೀರಾಮಕೃಷ್ಣರ ಸಾರ್ವಜನಿಕ ಉತ್ಸವ. ಅಂದು ವಿದೇಶಿ ಭಕ್ತರನ್ನು ಎದುರುಗೊಂಡು ಉಪಚರಿಸುವ ಜವಾಬ್ದಾರಿಯನ್ನು ವಿರಜಾನಂದರಿಗೆ ವಹಿಸಲಾಗಿತ್ತು. ಈ ಉತ್ಸವದ ಕೆಲದಿನಗಳ ನಂತರ ವಿರಜಾನಂದರು ಶ್ಯಾಮಲಾತಾಲ್‌ಗೆ ಕಾಶಿಯ ಮಾರ್ಗವಾಗಿ ಹೊರಟರು. ಕಾಶಿಯಲ್ಲಿದ್ದ ಹರಿ ಮಹಾರಾಜರನ್ನು ಶ್ಯಾಮಲಾತಾಲಿಗೆ ಆಹ್ವಾನಿಸಿ, 'ನೀವು ಶ್ಯಾಮಲಾತಾಲ್‌ಗೆ ಬಂದುಬಿಡಿ, ಅಲ್ಲಿಯ ಆರೋಗ್ಯಕರ ಹಾಗೂ ತಂಪಾದ ಗಾಳಿ ನೀರಿನಿಂದ ನಿಮ್ಮ ಶರೀರ ಸ್ವಾಸ್ಥ್ಯ ಸುಧಾರಿಸುತ್ತದೆ' ಎಂದು ಕಳಕಳಿಯಿಂದ ಕೇಳಿಕೊಂಡರು. ಆದರೆ ಹರಿ ಮಹಾರಾಜರು ಆಗಿನ ತಮ್ಮ ದುರ್ಬಲ ಆರೋಗ್ಯವನ್ನು ನೆನೆದು ಪರ್ವತ ಪ್ರದೇಶವಾದ ಶ್ಯಾಮಲಾತಾಲ್‌ಗೆ ಹೋಗುವ ಧೈರ್ಯ ಮಾಡಲಿಲ್ಲ.

ಶ್ಯಾಮಲಾತಾಲ್‌ಗೆ ತಲುಪಿದ ಕೆಲದಿನಗಳಲ್ಲೇ ವಿರಜಾನಂದರಿಗೆ, 'ರಾಜಾ ಮಹಾರಾಜರು ಕಾಲರಾ ರೋಗಕ್ಕೆ ಈಡಾಗಿದ್ದರೂ, ಆರೋಗ್ಯ ಅಷ್ಟೇನೂ ಹದಗೆಟ್ಟಿಲ್ಲ' ಎಂಬ ಸಮಾಚಾರ ಬಂತು. ಇದಾದ ಮೂರು ದಿನಗಳ ನಂತರ ಬಂದ ಪತ್ರದಲ್ಲಿ 'ಮಹಾರಾಜರು ಕ್ರಮೇಣ ಸುಧಾರಿಸಿಕೊಳ್ಳುತ್ತಿದ್ದಾರೆ' ಎಂದಿತ್ತು. ಇದನ್ನೋದಿ ವಿರಜಾನಂದರು ನಿಶ್ಚಿಂತರಾದರು. ಆದರೆ ಇದಾದ ಐದು ದಿನಗಳಲ್ಲೇ ಬಂದ ಟೆಲಿಗ್ರಾಂನಲ್ಲಿ ಹೃದಯ ವಿದ್ರಾವಕ ಸುದ್ದಿಯಿತ್ತು: 'ಏಪ್ರಿಲ್ ೧೦ರಂದು ರಾತ್ರಿ ಬ್ರಹ್ಮಾನಂದರು ಮಹಾಸಮಾಧಿಯಲ್ಲಿ ಲೀನವಾದರು' ಎಂದು. ವಿರಜಾನಂದರು ವಿಷಣ್ಣರಾದರು. ಬ್ರಹ್ಮಾನಂದರಿಗೆ ನಮಸ್ಕರಿಸಿ ಅವರ ಆಶೀರ್ವಾದವನ್ನು ಪಡೆದು ಬಂದು ಇನ್ನೂ ಮೂರು ವಾರ ಸಂದಿರಲಿಲ್ಲ. ಅಷ್ಟರಲ್ಲೇ ಅನಿರೀಕ್ಷಿತವಾದ ರೀತಿಯಲ್ಲಿ ಅವರು ಈ ಮರ್ತ್ಯಲೋಕವನ್ನು ತ್ಯಜಿಸಿಬಿಟ್ಟರೆ! 'ಶ್ರೀರಾಮಕೃಷ್ಣ ಸಂಘ'ವೆಂಬ ಸೌಧದ ಕಲಶವೇ ಕಳಚಿ ಬಿದ್ದಂತಾಯಿತು.

ಸ್ವಾಮಿ ಶಿವಾನಂದರನ್ನು ಮಠ ಹಾಗೂ ಮಿಷನ್ನಿನ ಹೊಸ ಅಧ್ಯಕ್ಷರನ್ನಾಗಿ ಆರಿಸಲಾಯಿತು. ಸ್ವಾಮಿ ಬ್ರಹ್ಮಾನಂದರಿಂದ ದೀಕ್ಷಿತರಾದ ಶ್ಯಾಮಬಾಬುವು (ಶ್ರೀರಾಮಕೃಷ್ಣರ ಭಕ್ತರಾದ ನವಗೋಪಾಲ ಘೋಷರ ಪುತ್ರ) ಅವರ (ಬ್ರಹ್ಮಾನಂದರ) ಸಮಾಧಿ ಮಂದಿರದ ನಿರ್ಮಾಣಕ್ಕಾಗಿ ೪೦,೦೦೦ ರೂ.ಗಳನ್ನು ಕೊಟ್ಟಿದ್ದಾರೆಂಬ ವಿಷಯವು ವಿರಜಾನಂದರಿಗೆ ತಿಳಿದುಬಂತು.

ಜುಲೈ ತಿಂಗಳ ಪ್ರಾರಂಭದಲ್ಲಿ ವಿರಜಾನಂದರು ಕೆಲಸದ ನಿಮಿತ್ತ ಮಾಯಾವತಿಗೆ ಹೋಗಬೇಕಾಗಿ ಬಂತು. ಚಂಪಾವತ್‌ನಲ್ಲಿ ವಿಮಲ್ (ದಯಾನಂದ) ಮತ್ತು ದ್ವಿಜೇನ್ (ವಿವಿದಿಷಾನಂದ)ರೊಂದಿಗೆ ಭೇಟಿಯಾಯಿತು. ಹರಿ ಮಹಾರಾಜರಿಗೆ ಬೆನ್ನು ಫಣಿಯಾಗಿದೆ ಎಂಬ ಸುದ್ದಿ ಕೇಳಿ ಅವರಿಬ್ಬರೂ ಅವರನ್ನು ನೋಡಲು ಕಾಶಿಗೆ ಹೋಗುತ್ತಿದ್ದರು. ಇದನ್ನು ಕೇಳಿದ ವಿರಜಾನಂದರು 'ಕಾಲವು ಮತ್ತೊಂದು ಇಂಗಿತವನ್ನು ನೀಡುತ್ತಿದೆ; ಬಹುಶಃ ಈ ಬಾರಿ ಶ್ರೀರಾಮಕೃಷ್ಣರು ತುರೀಯಾನಂದರನ್ನು ತಮ್ಮೆಡೆಗೆ ಸೆಳೆದುಕೊಂಡು ಬಿಡುವರೇನೋ!' ಎಂದುಕೊಂಡರು. ಆ ಶಂಕೆ ಸತ್ಯವಾಯಿತು. ಶ್ಯಾಮಲಾತಾಲ್‌ಗೆ ಹಿಂದಿರುಗಿದ ಎರಡು ದಿನಗಳ ಬಳಿಕ — ಅಂದರೆ ೧೯೨೨ರ ಜುಲೈ ೨೦ರಂದು ಹರಿ ಮಹಾರಾಜರು ತಮ್ಮ ಶರೀರವನ್ನು ತ್ಯಜಿಸಿದರೆಂಬ ಸುದ್ದಿ ಬಂತು.

ಓ! ಅದೆಂತಹ ಅದ್ಭುತ ಮಹಾಪುರುಷರಾಗಿದ್ದರು ಹರಿ ಮಹಾರಾಜರು! ಅವರಿಂದ ವಿರಜಾನಂದರು ಸಾಧನಾಕ್ಷೇತ್ರದಲ್ಲಿ ಬಹಳಷ್ಟು ಪ್ರೇರಣೆಯನ್ನು ಪಡೆದಿದ್ದರು; ಹಾಗೆಯೇ ಕಾರ್ಯಕ್ಷೇತ್ರದಲ್ಲಿಯೂ ಸಹ. ಸ್ವಾಮೀಜಿಯವರನ್ನು ನೋಡಲೇಬೇಕೆಂಬ ಹಂಬಲವನ್ನಿಟ್ಟುಕೊಂಡು ತುರೀಯಾನಂದರು ಅಮೇರಿಕೆಯಿಂದ ಹೊರಟುಬಂದಿದ್ದರು. ಆದರೆ ಅವರ ಹಡಗು ರಂಗೂನನ್ನು ತಲುಪಿದಾಗ ಸ್ವಾಮೀಜಿಯವರ ಮಹಾಸಮಾಧಿಯ ವಿಷಯ ತಿಳಿದುಬಂತು. ಅವರು ಭಗ್ನಹೃದಯರಾಗಿ ಮಠವನ್ನು ತಲುಪಿದರು; ಕೆಲವೇ ದಿನಗಳಲ್ಲಿ ಬೃಂದಾವನಕ್ಕೆ ಹೊರಟುಬಿಟ್ಟರು. ಬೃಂದಾವನದಲ್ಲಿ ಏಕಾಂತದಲ್ಲಿದ್ದುಕೊಂಡು ಭಗವಚ್ಚಿಂತನೆಯಲ್ಲಿ ಮುಳುಗಿ ಸ್ವಾಮೀಜಿಯವರ ಅಗಲಿಕೆಯ ದುಃಖವನ್ನು ದೂರಗೊಳಿಸಲಿಚ್ಛಿಸಿದರು. ಅವರು ತಮ್ಮ ಜೀವನದಲ್ಲಿ ಮತ್ತೆಂದಿಗೂ ಕಾರ್ಯಕ್ಷೇತ್ರಕ್ಕಿಳಿಯಲಿಲ್ಲ. ಆದರೆ ಸ್ವಾಮೀಜಿಯವರಿಂದ ಪ್ರವರ್ತಿಸಲ್ಪಟ್ಟ ಕರ್ಮಯೋಗದಲ್ಲಿ ಅತಂದ್ರಿತ ನಿಷ್ಠೆಯಿಂದ ತಮ್ಮನ್ನು ತಾವೇ ತೊಡಗಿಸಿಕೊಳ್ಳಲು ಮಠಕ್ಕೆ ಸೇರಿದ ಯುವಕರಿಗೆ ಬಹಳ ಪ್ರೋತ್ಸಾಹಿಸುತ್ತಿದ್ದರು. ಹಾಗೂ ಯುವಕರಿಗೆ ಹೀಗೆಂದು ಹೇಳುತ್ತಿದ್ದರು: ''ನೋಡಿಲ್ಲಿ , ನಾನು ಅಮೇರಿಕೆಯಿಂದ ಹಿಂತಿರುಗಿದ ಮೇಲೆ ಸ್ವಾಮೀಜಿಯವರ ಕೆಲಸದಲ್ಲಿ ನನ್ನನ್ನು ನಾನೇ ತೊಡಗಿಸಿಕೊಳ್ಳಲಿಲ್ಲ. ಆದ್ದರಿಂದ ನನ್ನ ಶರೀರಾರೋಗ್ಯ ಹೇಗೆ ಕುಂದಿದೆ! ನನ್ನ ಆರೋಗ್ಯವೇನಾದರೂ ಸುಧಾರಿಸಿದರೆ ಮತ್ತೆ ಸ್ವಾಮೀಜಿಯವರ ಕಾರ್ಯದಲ್ಲಿ ಮಗ್ನನಾಗುವೆ.''

*(ಮುಂದುವರಿಯುವುದು)*

# ಅಪರೂಪದ ಗುರು ಅಲ್ಲಮಪ್ರಭು

ಶಶಿಕಲಾ ಶ್ರೀಧರ್

ಹನ್ನೆರಡನೇ ಶತಮಾನದಲ್ಲಿ ಶರಣ ಚಳವಳಿಯ ನೇತಾರರಲ್ಲಿ ದಿವ್ಯ ಜ್ಯೋತಿಯಾಗಿ ಬೆಳಗಿದ ಶ್ರೇಷ್ಠ ಸಂತರೇ ಅಲ್ಲಮ ಪ್ರಭು ದೇವರು. ಬಸವೇಶ್ವರರೇ ಮೊದಲಾದ ಮಹಾನ್ ಶರಣರ ಒಡನಾಡಿಯೂ, ಹಲವರಿಗೆ ಮಾರ್ಗದರ್ಶಕರೂ ಆಗಿದ್ದ ಅವರ ದಿವ್ಯ ಮಾರ್ಗ ಇಂದಿಗೂ ಸಮಾಜಕ್ಕೆ ಪ್ರಸ್ತುತವಾಗಿದೆ. ಗುರುವಾಗಿ ಅವರ ಹಿರಿಮೆಯನ್ನಿಲ್ಲಿ ಪ್ರಸ್ತುತಪಡಿಸಲಾಗಿದೆ. ಲೇಖಕರು ಬೆಂಗಳೂರು ರಾಮಕೃಷ್ಣ ಮಠದ ಭಕ್ತರು. ಅವರು ಸಂಸ್ಕೃತ, ಸಂಗೀತ ಕ್ಷೇತ್ರಗಳಲ್ಲಿ ನುರಿತವರು; ಹಲವು ಆಧ್ಯಾತ್ಮಿಕ ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ.

ಶಿವಶರಣರ ಅನುಭವಮಂಟಪದ ಅಧ್ಯಕ್ಷರೂ, ಶೂನ್ಯ ಸಿಂಹಾಸನಾಧೀಶರೂ ಆದ ಅಲ್ಲಮಪ್ರಭುಗಳ ಜೀವನ ಹಾಗೂ ಮಾರ್ಗದರ್ಶನ ಅದ್ಭುತ, ಅಪಾರ ಹಾಗೂ ಅಮರ. ಅವರ ಶಿವಾನುಭವ ಸನ್ಮಾರ್ಗದರ್ಶಕ. ಅವರು ಸಾಧಕರನ್ನು ತಿದ್ದುವ ಪರಿ ಅಪರೂಪ ಹಾಗೂ ಆಶ್ಚರ್ಯಕರ. ಭಕ್ತರು ನಡೆಸುತ್ತಿದ್ದ ಇಹಜೀವನದ ಮೂಲಕವೇ ಅವರು ಉಜ್ಜೀವನಕ್ಕೆ ದಾರಿ ತೋರಿ, ಪರವನ್ನು ಪಡೆಯುವ ಪರಿಯನ್ನು ಹಲವು ಬಗೆಯಿಂದ ತಿಳಿಸಿಕೊಟ್ಟು, ಪರಶಿವನ ಅನುಗ್ರಹಕ್ಕೆ ಪಾತ್ರರನ್ನಾಗಿಸಿದ ರೀತಿ ಅಸಾಮಾನ್ಯ, ಅದ್ಭುತ!

ಈ ವಿಚಾರದ ನಿಟ್ಟಿನಲ್ಲಿ ಅಲ್ಲಮರಿಂದ ಮಾರ್ಗ ಕಂಡುಕೊಂಡು ಅನುಗೃಹೀತರಾದ ಕೆಲವು ಸಾಧಕರನ್ನು ಸ್ಮರಿಸೋಣ.

### ೧. ತೋಟಗಾರ ಗೊಗ್ಗಯ್ಯ:

ಅಲ್ಲಮ ಪ್ರಭುದೇವರು ಲೋಕಾನುಗ್ರಹಕ್ಕಾಗಿ ಬನವಾಸಿಯಿಂದ ಹೊರಟು ನಾನಾ ಪ್ರಾಂತಗಳಲ್ಲಿ ಸಂಚರಿಸುತ್ತಾ, ಬೆಳವಲ ನಾಡಿಗೆ ಆಗಮಿಸುತ್ತಿದ್ದಾಗ, ದಾರಿಯ ಪಕ್ಕದಲ್ಲಿ ಸೊಂಪಾಗಿ ಬೆಳೆದಿದ್ದ ತೋಟವೊಂದನ್ನು ಕಾಣುತ್ತಾರೆ. ಆ ತೋಟದ ಒಡೆಯ ಗೊಗ್ಗಯ್ಯ. ಇವರಿಬ್ಬರ ನಡುವೆ ನಡೆದ ಸಂಭಾಷಣೆ ಸ್ವಾರಸ್ಯಕರ.

ಅಲ್ಲಮ: (ಗೊಗ್ಗಯ್ಯನಿಗೆ) ಶರಣಾರ್ಥಿ.

ಗೊಗ್ಗಯ್ಯ: (ಕೈಮುಗಿದು) ಶರಣಾರ್ಥಿ. ತಾವು ಯಾರು?

ಅಲ್ಲಮ: ಎಲ್ಲೆಲ್ಲಿ ಶಿವಭಕ್ತರಿರುತ್ತಾರೆಯೋ ಅವರಲ್ಲಿ ಭಕ್ತಿಭಿಕ್ಷೆಯನ್ನು ಬೇಡುವವರು ನಾವು. ನನ್ನನ್ನು ಅಲ್ಲಮಪ್ರಭು ಎಂದು ಕರೆಯುತ್ತಾರೆ. ಧರ್ಮಮಾರ್ಗದಿಂದ ಸಂಪಾದಿಸಿದ ಅರ್ಥವನ್ನು ಲಿಂಗ ಜಂಗಮರಿಗೆ ನೀಡಿ ಉಳಿದುದನ್ನು ತಾನು ಉಂಡು ಸುಖವಾಗಿರುವುದೇ ನಮ್ಮ ಶಿವಭಕ್ತಿ. ನೀನು ಇಷ್ಟು ಕಷ್ಟಪಟ್ಟು ಬೇಸಾಯ ಮಾಡಲೇನು ಕಾರಣ? ಈ ತೋಟದ ಕೆಲಸದಿಂದ ನಿನಗೆ ಬರುವ ಭಾಗ್ಯವೇನು?

ಗೊಗ್ಗಯ್ಯ: ಇದು ನನ್ನ ಕುಲವೃತ್ತಿ. ನನ್ನ ಕುಲವೃತ್ತಿಯನ್ನು ಸಂತೋಷದಿಂದ ಮಾಡುವುದರಲ್ಲೇ ನನಗೆ ಸಾರ್ಥಕತೆ ಎನಿಸುವುದು. ನಿಮ್ಮ ಕುಲವೃತ್ತಿ ಏನೆಂದು ನಾನು ತಿಳಿಯಬಹುದೇ?

ಅಲ್ಲಮ: ನಾನೂ ನಿನ್ನಂತೆಯೇ ತೋಟಗಾರ. ಆದರೆ ನಾನು ಮಾಡುವ ಬೇಸಾಯ ನಿನ್ನ ಬೇಸಾಯದಂತಲ್ಲ. ನನ್ನ ತೋಟ ಎಂಥದೆಂಬುದನ್ನು ಹೇಳುತ್ತೇನೆ ಕೇಳು.

ತನುವ ತೋಂಟವ ಮಾಡಿ, ಮನವ ಗುದ್ದಲಿಯ ಮಾಡಿ
ಅಗೆದು ಕಳೆದೆನಯ್ಯ ಭ್ರಾಂತಿಯ ಬೇರ ಒಡೆದು
ಸಂಸಾರದ ಹೆಂಟೆಯ ಬಗಿದು ಬಿತ್ತಿದೆನಯ್ಯಾ ಬ್ರಹ್ಮಬೀಜವ
ಅಖಂಡಮಂಡಲವೆಂಬ ಬಾವಿ, ಪವನವೇ ರಾಟಾಳ
ಸುಷುಮ್ನ ನಾಳದಿಂದ ಉದಕವ ತಿದ್ದಿ
ಬಸವಗಳೈವರು ಹಸಗೆಡಿಸಿಹವೆಂದು
ಸಮತೆ ಸೈರಣೆ ಎಂಬ ಬೇಲಿಯನಿಕ್ಕಿ
ಆವಾಗಳೂ ಈ ತೋಂಟದಲ್ಲಿ ಜಾಗರವಿದ್ದು
ಸಸಿಯ ಸಲಹಿದೆನು ಕಾಣಾ ಗುಹೇಶ್ವರಾ

ಗೊಗ್ಗಯ್ಯ: ಪ್ರಭುವೇ, ಬೇಸಾಯವೇ ನನ್ನ ಕಾಯಕ. ನಾನು ಕೇವಲ ಲೌಕಿಕ ವ್ಯಕ್ತಿ. ನನಗೇನೂ ತಿಳಿಯದು. ನೀವು ಕರುಣೆಯಿಂದ ಜ್ಞಾನಪ್ರದಾನ ಮಾಡಬೇಕು.

ಅಲ್ಲಮ: ಗೊಗ್ಗಯ್ಯ, ಕೇವಲ ಬಾಹ್ಯ ಕರ್ಮಗಳಿಂದ ನಿಜ ಸುಖ ದೊರೆಯದು. ಮಾಡುವ ಕರ್ಮಗಳೆಲ್ಲವನ್ನೂ ಶಿವನಿಗರ್ಪಿತ ಎಂಬ ಭಾವದಿಂದ ಮಾಡಿದಾಗ, ಕರ್ಮವೆಂಬುದು ಕರ್ಮಯೋಗವಾಗುವುದು. ಆಗ ಶಿವನು ಬೇರೆಯಲ್ಲ ನಾನು ಬೇರೆಯಲ್ಲ ಎಂಬ ತಾದಾತ್ಮ್ಯ ಉಂಟಾಗುವುದು. ಅಂತರ್ಮುಖಿಯಾಗಿ ಪರಶಿವ ತತ್ತ್ವದ ಚಿಂತನೆಯಲ್ಲಿ ಐಕ್ಯನಾದರೆ ಅದೇ ನಿಜ ಮುಕ್ತಿ.

ಗೊಗ್ಗಯ್ಯ: ಗುರುವೇ, ಭಕ್ತಿ ಮಾರ್ಗ ಕಠಿಣ. ಅದನ್ನು ಪಡೆಯುವ ಬಗೆಯನ್ನು ಕೃಪೆಯಿಂದ ಅನುಗ್ರಹಿಸಬೇಕು.

ಅಲ್ಲಮ: ನಿಜಭಕ್ತಿಮಾರ್ಗದಲ್ಲಿ ನಡೆದಾಗ ನಿನ್ನಲ್ಲಿ ಪರಶಿವ ತತ್ತ್ವದ ಪ್ರಕಾಶ ಬೆಳಗಿ ಅರಿವುಂಟಾಗುವುದು. ಜಗತ್ತಿನ ನಿಸ್ಸಾರತೆಯ ಅರಿವುಂಟಾದಾಗ ನಿತ್ಯಾನಂದವನ್ನು ಪಡೆಯಲು ನೀನು 'ಶಿವೋಽಹಂ' ಎಂಬ ಭಾವದಲ್ಲಿ ಲೀನನಾಗು. ಆಗ ನಿನಗೆ ನಿಜ ಸಮಾಧಿ ಸ್ಥಿತಿಯ ಅನುಭವವಾಗುವುದು.

ಗೊಗ್ಗಯ್ಯ: ಪ್ರಭುವೇ, ನಿಜಸಮಾಧಿ ಸ್ಥಿತಿ ಹೇಗಿರುತ್ತದೆ? ಅದರ ಅನುಭವ ನನ್ನಂತಹ ಸಾಮಾನ್ಯನಿಗೂ ಸಾಧ್ಯವೆ?

ಅಲ್ಲಮ: ಭಕ್ತನೇ, ಅಂತಹ ಒಂದು ಉನ್ನತ ಸ್ಥಿತಿಯಲ್ಲಿ ಶಿವಾನಂದವನ್ನು ಅನುಭವಿಸುತ್ತಿರುವ ಯೋಗಿಯೊಬ್ಬರನ್ನು ತೋರಿಸುತ್ತೇನೆ ಬಾ. (ಭೂಗರ್ಭದಲ್ಲಿ ಅಡಗಿದ್ದ ದಿವ್ಯವಾದ ದೇವಾಲಯದೊಳಗೆ ಪ್ರಭುಗಳು ಗೊಗ್ಗಯ್ಯನನ್ನು ಕರೆದೊಯ್ದು) ನೋಡು ಗೊಗ್ಗಯ್ಯ, ಇವರು ಅನಿಮಿಷಯ್ಯ ಎಂಬ ಮಹಾಯೋಗಿಗಳು. ಇವರು ಆನಂದಿಸುತ್ತಿರುವ ಈ ಸ್ಥಿತಿಯೇ ನಿಜ ಸಮಾಧಿಸ್ಥಿತಿ.

ಗೊಗ್ಗಯ್ಯನು ಆ ಶಿವಯೋಗಿಯನ್ನು ಕಂಡು ಬೆರಗಾಗಿ, 'ಸ್ವಾಮಿ ಶರಣಾರ್ಥಿ!' ಎಂದು ಹೇಳುತ್ತಾ ಅವರ ಪಾದಾಭಿವಂದನೆ ಮಾಡುತ್ತಾನೆ.

ಹೀಗೆ ಪ್ರಭುದೇವರು ಕೇವಲ ವ್ಯವಸಾಯ ಮಾಡುತ್ತಿದ್ದ ಗೊಗ್ಗಯ್ಯನಿಗೆ ಆತ್ಮವ್ಯವಸಾಯದ ಅರಿವನ್ನು ಕರುಣಿಸುತ್ತಾರೆ.

ಅಲ್ಲಮರು ಸ್ವತಃ ತಾವೇ ಜ್ಞಾನಿಯಾಗಿದ್ದರೂ ಗುರುವಿನ ಕರುಣೆಯಿಲ್ಲದೆ ಜೀವ ಶಿವನಲ್ಲಿ ತಾದಾತ್ಮ್ಯ ಹೊಂದಲು ಅಸಾಧ್ಯವೆಂಬುದನ್ನು ಗೊಗ್ಗಯ್ಯನ ಮೂಲಕ ಜಗತ್ತಿಗೆ ತೋರುತ್ತಾರೆ.

ಶಿವದೀಕ್ಷೆಯ ಬಳಿಕ ಶಿಷ್ಯ ಗುರುವಿನಲ್ಲಿ ಸಮರಸ ಭಾವವನ್ನು ಹೊಂದಿ ಭ್ರಮರ-ಕೀಟ ನ್ಯಾಯದಂತೆ ಜೀವನೇ ಶಿವನಾಗುತ್ತಾನೆ ಎಂದು ಗೊಗ್ಗಯ್ಯನನ್ನು ನೆಪವಾಗಿಟ್ಟುಕೊಂಡು ಜಗತ್ತಿಗೆ ಬೋಧಿಸಿದರು ಪ್ರಭುದೇವರು.

### ೨. ಅಜಗಣ್ಣನ ತಂಗಿ ಮುಕ್ತಾಯಿ

ಅಡಕವೆಂಬ ಗ್ರಾಮದಲ್ಲಿ ಮಹಾಜ್ಞಾನಿ ಅಜಗಣ್ಣನೆಂಬ ಶರಣ ಸಾವನ್ನಪ್ಪಿ ಕೆಲವು ದಿನಗಳಾಗಿವೆ. ಅಲ್ಲಿಗೆ ಸ್ವಲ್ಪ ದೂರದಲ್ಲಿದ್ದ ಮೊಸರೂರಿನಲ್ಲಿ ಅವನ ತಂಗಿ ಮುಕ್ತಾಯಿ ಎಂಬಾಕೆ ಇದ್ದಾಳೆ. ಅಣ್ಣತಂಗಿಯರು ಅತ್ಯಂತ ಪ್ರೀತಿಯಿಂದ ಇದ್ದುದರಿಂದ ಅಣ್ಣನ ಸಾವು ತಂಗಿಗೆ ಅಪಾರ ದುಃಖವನ್ನುಂಟು ಮಾಡಿದೆ. ಹಲವು ವಿಧದಿಂದ ದುಃಖಿಸುತ್ತಾ, ಅಣ್ಣನ ಅಗಲಿಕೆಯ ನೋವಿನಿಂದ ಬೇಯುತ್ತಿದ್ದ ಮುಕ್ತಾಯಿಯ ವಿಷಯ ಅಲ್ಲಮರಿಗೆ ತಿಳಿದು ಬರುತ್ತಲೇ, ದುಃಖಾರ್ತರನ್ನು ಕೂಡಲೇ ಸಂತೈಸುವ ಈ ಮಹಾ ಕಾರುಣಿಕನು ಮುಕ್ತಾಯಿಯನ್ನು ಕಂಡು ಆಕೆಯ ದುಃಖವನ್ನು ನಿವಾರಿಸಿ, ಆನಂದ ಸಾಮ್ರಾಜ್ಯವನ್ನು ಕಟ್ಟುವ ಪರಿಯನ್ನು ನೋಡೋಣ:

ಅಲ್ಲಮ: ಅಮ್ಮಾ, ಅಜಗಣ್ಣ ಸಾಮಾನ್ಯನೆ? ಶಿವ ಪಂಚಾಕ್ಷರಿ ಮಂತ್ರದಿಂದ ಪುನೀತನಾಗಿದ್ದ ಅವನು ಅಮರನಾಗಿದ್ದಾನೆ. ಶರೀರ ಕಣ್ಣೆದುರಿಗಿಲ್ಲೆಂದು ದುಃಖಿಸಬಹುದೆ? ಇಂತಹ ಮೋಹದಿಂದ ಪ್ರಯೋಜನವೇನು? ಮೋಹವೇ ದುಃಖಕ್ಕೆ ಮೂಲ. ಇದನ್ನು ನೀನರಿಯೆಯಾ?

ಮುಕ್ತಾಯಕ್ಕ: ಪ್ರಭುವೇ, ಅಜಗಣ್ಣ ನನ್ನ ಒಡಹುಟ್ಟಿದ ಸೋದರ. ಅವನೇ ನನ್ನ ಸಕಲ ಸೌಭಾಗ್ಯವಾಗಿದ್ದನು. ಅವನನ್ನು ಹೊರತು ನನಗೆ ಬೇರಾರೂ ಗತಿಯಿಲ್ಲ. ಅವನನ್ನು ಅಗಲಿ ನಾನು ಬದುಕುವುದಾದರೂ ಹೇಗೆ?

ಅಲ್ಲಮ: ಅಕ್ಕಾ, ನೀನು ಮರುಗಲು ಕಾರಣವಿಲ್ಲ. ನಿನ್ನ ಸೋದರ ಗುಹೇಶ್ವರ ಲಿಂಗದಲ್ಲಿ ಬೆರೆತುಹೋಗಿದ್ದಾನೆ.

ಮುಕ್ತಾಯಕ್ಕ: ದೇವಾ, ನಿನ್ನ ಬೆಡಗಿನ ಮಾತು ಸಾಕು. ಒಡಹುಟ್ಟಿದ ಸೋದರನ ಅಗಲಿಕೆಯ ದುಃಖ ಸೋದರಿಯಾದ ನನಗೆ ಮಾತ್ರ ಗೊತ್ತು. ಇಷ್ಟುದಿನವೂ ಅವನು ನನ್ನೊಡನಿದ್ದನು. ಈಗ ಇಲ್ಲವಾಗಿದ್ದಾನೆ.

ಅಲ್ಲಮ: ತಾಯಿ, ಶರಣರು ನಿಮಿತ್ತಮಾತ್ರ ಶರೀರ ಧರಿಸುತ್ತಾರೆ. ಅಷ್ಟುಮಾತ್ರಕ್ಕೆ ಅವನು ನಿನ್ನವನಾಗುತ್ತಾನೆಯೆ? ವಿಚಾರ ಮಾಡು. ಅಜಗಣ್ಣ ಮಹಿಮಾಶಾಲಿ. ಆತ ನಿತ್ಯಾತ್ಮ.

ಮುಕ್ತಾಯಕ್ಕ: ಗುರುವೇ, ಆತನೇನೋ ಮಹಿಮಾಶಾಲಿ, ನಿತ್ಯಾತ್ಮ ಇರಬಹುದು. ಅವನಿಲ್ಲದ ಮೇಲೆ ನಾನಿದ್ದು ಫಲವೇನು?

ಅಲ್ಲಮ: ಅಮ್ಮಾ, ಶಿವಭಕ್ತರಿಗೆ ಮರಣವಿಲ್ಲ. ಅಜಗಣ್ಣನ ಜೀವ ಶಿವನಲ್ಲಿ ಐಕ್ಯವಾಗಿದೆ. ಅವನಿಗೆ ಪುನರ್ಜನ್ಮವಿಲ್ಲ. ಆದ್ದರಿಂದ ನೀನು ವಿವೇಕವನ್ನು ತಂದುಕೊ.

ಮುಕ್ತಾಯಕ್ಕ: ದೇವಾ ನಿಮ್ಮವರುಗಳ ಪರಿಯನು
ನೀವೇ ಬಲ್ಲಿರಿ ಹಾವಿನಡಿಯನು
ಹಾವುಗಳು ನೆರೆ ಬಲ್ಲುವಲ್ಲದೆ ನಮಗೆ ಗೋಚರವೆ?

ಅಲ್ಲಮ: ಮುಕ್ತಾಯೀ, ಹರಿಗೋಲಿನ ಸಹಾಯದಿಂದ ತೊರೆಯನ್ನು ದಾಟುವವರಂತೆ ದೇವನ ಸ್ವರೂಪವನ್ನು ಅರಿತವರು ಕರ್ಮವನ್ನು ತ್ಯಜಿಸಿ ಅಂತರ್ಮುಖಿಗಳಾಗುತ್ತಾರೆ.

ಮುಕ್ತಾಯಕ್ಕ: ಶಿವಯೋಗಿ, ದೇಹಿಗಳು ಕರ್ಮಗಳನ್ನು ತೊರೆದರೆ ಜೀವನು ಯಾವ ಆಶ್ರಯದಲ್ಲಿರುತ್ತಾನೆ? ಬಯಲಾಗುವುದೆಂದರೇನು? ಮನಸ್ಸು ಪಟುವಾಗುವುದು ಹೇಗೆ?

ಅಲ್ಲಮ: ತಂಗಿ, ಶಿಶುಗಳಿಗೆ ತಾಯಿಯ ಹಾಲೇ ಜೀವನವಾಗಿರುವುದಾದರೂ, ಹಾಲು ಕುಡಿಸುತ್ತಿರುವ ಕಾಲದಲ್ಲಿಯೇ ಮೆಲ್ಲಮೆಲ್ಲನೆ ಅನ್ನವನ್ನು ತಿನ್ನಿಸುತ್ತಾ ಮಕ್ಕಳನ್ನು ಪಟುಮಾಡುವುದಿಲ್ಲವೆ? ಇದರಂತೆಯೇ ಕರ್ಮವನ್ನು ಮರೆತು ಮನಸ್ಸನ್ನು ನಿರಾಳದಲ್ಲಿ ನಿಲ್ಲಿಸಲು ಸಾಧನೆ ಮಾಡಬೇಕು. ಈ ಸಾಧನೆಯ ಬಲದಿಂದ ದೇಹಗುಣವು ಅಳಿದು ಈ ಜೀವ ದೇವನಾಗುತ್ತಾನೆ. ಈ ಜೀವ-ದೇವನ ಐಕ್ಯದ ಅವಸ್ಥೆಯೇ ಬಯಲು.

ಮುಕ್ತಾಯಕ್ಕ: ಜೀವನ್ಮುಕ್ತ ಶಿವಯೋಗಿಯೆ, ನೀನು ಹೇಳುವುದು ನನಗೆ ಅರ್ಥವಾಗುತ್ತಿಲ್ಲ. ಈ ಪರಮತತ್ತ್ವವನ್ನು ಬೋಧಿಸುವ ನಿನಗೆ ಇನ್ನೂ ಮನೋವಾಕ್ಕಾಯ ಕರ್ಮಗಳಿರಲು ಕಾರಣವೇನು?

ಅಲ್ಲಮ: (ನಸುನಕ್ಕು) ಅಮ್ಮಾ, ಬೆಂಕಿಯಲ್ಲಿ ಬೆಂದ ನುಲಿ ತನ್ನ ಮೊದಲಿನ ಆಕಾರವಾಗಿಯೇ ಇರುತ್ತದೆಯಾದರೂ ಅದು ನೇಯುವ ಕೆಲಸಕ್ಕೆ ಬರುವುದಿಲ್ಲ. ಶಿವಜ್ಞಾನವೆಂಬ ಅಗ್ನಿಯಲ್ಲಿ ಬೆಂದು ಹೋದ ಒಡಲಿಗೆ ಮನೋವಾಕ್ಕಾಯಕರ್ಮಗಳು ಇದ್ದಂತೆ ಕಂಡರೂ ಅವು ಇರುವುದಿಲ್ಲ.

ಹೀಗೆ ಮುಕ್ತಾಯಿಗೆ ಪ್ರಭುಗಳಿಂದ ಶಿವತತ್ತ್ವ ರಹಸ್ಯದ ಬೋಧೆಯಾಗುತ್ತಲೇ ಅವಳ ಮನಸ್ಸಿನ ವ್ಯಾಕುಲತೆ ಕಳೆದಿದೆ. ಅಜ್ಞಾನದ ಅಂಧಕಾರ ಅಳಿದಿದೆ. ಪ್ರಭುವಿನ ಮಹಿಮೆಗೆ 'ನಮೋ ನಮೋ' ಎಂದು ಸ್ತುತಿಸುತ್ತಾ, ಶಬ್ದ ಮುಗ್ಧವಾಗಿ, 'ಎನ್ನ ಅಜಗಣ್ಣ ತಂದೆಯ ಬೆರಸಿದ ಬಳಿಕ ಉರಿ ಉಂಡ ಕರ್ಪೂರದಂತಾದೆನಯ್ಯ' ಎಂದು ಹೇಳುತ್ತಾ ನಿತ್ಯಸುಖವನ್ನು ಪಡೆದಿದ್ದಾಳೆ.

### ೩. ಕರ್ಮಯೋಗಿ ಸಿದ್ಧರಾಮ

ಸೊನ್ನಲಾಪುರದಲ್ಲಿ ವಾಸಿಸುತ್ತಿದ್ದ ಮುದ್ದಯ್ಯ, ಮುದ್ದವ್ವೆ ಎಂಬುವರು ತಮ್ಮ ಮುಪ್ಪಿನ ಕಾಲದಲ್ಲಿ ಪಡೆದ ಪುತ್ರರತ್ನವೇ ಕರ್ಮಯೋಗಿ ಸಿದ್ಧರಾಮ. ಅವನು ಚಿಕ್ಕಂದಿನಿಂದಲೂ ಶಿವಪೂಜೆ ಶಿವಧ್ಯಾನಗಳಲ್ಲೇ ಕಾಲ ಕಳೆಯುತ್ತಿದ್ದಾನೆ. ಅವನು ಜಡಪ್ರಕೃತಿಯವನಾಗಿದ್ದನೆಂದು ಅವನಿಗೆ ದನಕಾಯುವ ಕೆಲಸಕ್ಕೆ ನೇಮಿಸಿದ್ದಾರೆ. ಅವನು ಒಂದು ಮರದಡಿಯಲ್ಲಿ ಶಿವಲಿಂಗವನ್ನು ಸ್ಥಾಪಿಸಿ ಶ್ರೀಶೈಲ

ಮಲ್ಲಿಕಾರ್ಜುನನ ದರ್ಶನಕ್ಕಾಗಿ ಹೃತ್ಪೂರ್ವಕ ಪ್ರಾರ್ಥಿಸುತ್ತಿದ್ದಾನೆ. ಹೀಗೆಯೇ ಜೀವನ ಸಾಗುತ್ತಿದೆ. ಅವನೊಳಗೆ ಬೆಳಗುತ್ತಿದ್ದ ಪರಂಜ್ಯೋತಿಯನ್ನು ಯಾರೂ ಗುರುತಿಸುತ್ತಿಲ್ಲ.

ಒಮ್ಮೆ ಶ್ರೀಶೈಲಕ್ಕೆ ಯಾತ್ರೆ ಹೊರಟಿದ್ದ ಭಕ್ತರೊಡನೆ ಸಿದ್ಧರಾಮನೂ ಹೊರಟು, ಮಲ್ಲಿಕಾರ್ಜುನನ ದರ್ಶನವನ್ನು ಮನದಣಿಯೆ ಮಾಡಿ, ಅಲ್ಲಿಂದ ಶಿವಲಿಂಗವೊಂದನ್ನು ತಂದು ತನ್ನ ಊರಲ್ಲಿ ಪ್ರತಿಷ್ಠಾಪನೆ ಮಾಡಿ, ಅದಕ್ಕೆ ದೇವಾಲಯವನ್ನು ನಿರ್ಮಾಣ ಮಾಡಿ, ಪಕ್ಕದಲ್ಲಿ ವಿಶಾಲವಾದ ಕೆರೆಯೊಂದನ್ನು ಕಟ್ಟಿಸಿದ್ದಾನೆ. ಎಲ್ಲ ತೀರ್ಥಕ್ಷೇತ್ರಗಳ ಸಾನ್ನಿಧ್ಯವನ್ನು ಅಲ್ಲಿ ನೆಲೆಗೊಳಿಸಿದ್ದಾನೆ. ಇಂತಹ ಅನೇಕ ಕೆರೆಕಟ್ಟೆಗಳ, ಗುಡಿಗೋಪುರಗಳ ನಿರ್ಮಾಣದ ಕಾರ್ಯಗಳಲ್ಲೇ ಮಗ್ನನಾಗಿಬಿಟ್ಟಿದ್ದ ಸಿದ್ಧರಾಮ ಸಾಧನೆಯ ಉನ್ನತಾವಸ್ಥೆಗೆ ಇನ್ನೂ ಬಂದಿಲ್ಲ. ಖ್ಯಾತಿ, ಪೂಜಾಲಾಭ ಇವುಗಳಲ್ಲಿ ಮೈಮರೆತಿದ್ದ ಸಿದ್ಧರಾಮನಲ್ಲಿ ನಿಧಾನವಾಗಿ ಹೊಕ್ಕಿದ್ದ ಅಹಂಕಾರವನ್ನು ನಿರ್ಮೂಲ ಮಾಡಿ ಜ್ಞಾನವನ್ನು ಕರುಣಿಸುವ ಪರಮೋದ್ದೇಶದಿಂದ ಅಲ್ಲಮರು ಊರ ಹೊರಗಡೆ ಕೆರೆಕಟ್ಟುವ ಕೆಲಸದಲ್ಲಿ ತೊಡಗಿದ್ದ ಒಡ್ಡರ ಬಳಿ ಬಂದು,

ಒಡ್ಡರಾಮನಿದೇನು ಗೊಡವೆಯನೊಡ್ಡಿಕೊಂಡು
ವೃಥಾ ಮನಸ್ಸನ್ನು ಗೊಡ್ಡುಮಾಡಿಯೆ ಕೆಟ್ಟನಲ್ಲ?

ಎಂದು ಕೇಳಿದಾಗ, ತಮ್ಮ ಯಜಮಾನನೂ ಗುರುವೂ ಆದ ಸಿದ್ಧರಾಮನನ್ನು ತೆಗಳುತ್ತಿರುವ ಈ ಅಪರಿಚಿತ ವ್ಯಕ್ತಿ ಯಾರೆಂದೂ ವಿಚಾರಿಸದೆ ಸಿಟ್ಟಿಗೆದ್ದ ಆ ಒಡ್ಡರು, 'ಮರುಳು ಮಾನವ, ನೀನು ನುಡಿದರೆ ಸರಿಯೆ ಸಿದ್ದಂಗೆ' ಎಂದು ಕೂಗುತ್ತಾ ರೋಷಾವೇಷದಿಂದ ಪ್ರಭುಗಳನ್ನು ಬಂಧಿಸಲು ಧಾವಿಸಿದಾಗ ಅವರ ಕೈಗಳಿಗೆ ಪ್ರಭುಗಳ ಶರೀರವೇ ಸಿಗುತ್ತಿಲ್ಲ. ಬರಿಯ ಬಯಲನ್ನು ಹಿಡಿದಂತಾಗುತ್ತಿದೆ. ಕಲ್ಲುಗಳಿಂದ ಹೊಡೆಯಲು ಪ್ರಯತ್ನಿಸಿದಾಗ ಕಲ್ಲುಗಳು ರಾಶಿಯಾಗಿ ಬಿದ್ದವೇ ಹೊರತು ಅವು ಅಲ್ಲಮರಿಗೆ ತಾಗುತ್ತಲೇ ಇಲ್ಲ. ಈ ಸುದ್ದಿ ಸಿದ್ಧರಾಮನಿಗೆ ತಲುಪಿದಾಗ ಈತ ಸಾಮಾನ್ಯ ಜಂಗಮನಲ್ಲ ಎಂದು ತಕ್ಷಣವೇ ಅರಿವಾಗಿ, ಅವನು ಕೂಡಲೇ ಧಾವಿಸಿ ಬಂದು ಅಲ್ಲಮರನ್ನು ಕಂಡು, ಅವರ ತೇಜಸ್ಸಿಗೆ ಅರಿವಿಲ್ಲದೆಯೇ ತಲೆಬಾಗುತ್ತಿದ್ದಾನೆ. ಅವನ ಅಹಂಕಾರವೆಲ್ಲ ಅಡಗುತ್ತಿದೆ.

ಸಿದ್ಧರಾಮ: ಪ್ರಭು, ಜನರಿಗಾಗಿ ಕೆರೆ ಬಾವಿಗಳನ್ನೂ, ದೇವಾಲಯಗಳನ್ನೂ ನಿರ್ಮಿಸಿ ವಿರಕ್ತನಾಗಿದ್ದರೆ ಮುಕ್ತಿ ಇಲ್ಲವೆ?

ಅಲ್ಲಮ:

ಅನ್ನವನಿಕ್ಕಿ ನನ್ನಿಯ ನುಡಿದು ಅರವಟ್ಟಿಗೆಯನಿಕ್ಕಿ
ಕೆರೆಯ ಕಟ್ಟಿಸಿದರೆ ಮರಣದಿಂದ ಮೇಲೆ
ಸ್ವರ್ಗಸುಖ ಉಂಟಲ್ಲದೆ ಶಿವನ ನಿಜವು ಸಾಧ್ಯವಾಗದು
ಗುಹೇಶ್ವರನ ಅರಿದ ಶರಣಂಗೆ ಆವ ಫಲವೂ ಇಲ್ಲ
ಸಿದ್ಧರಾಮ, ಕೆರೆಯನ್ನು ಕಟ್ಟಬೇಕು, ಎಂತಹ ಕೆರೆಕಟ್ಟೆ?
ತನುವೆಂಬ ಏರಿಗೆ ಮನವೆಂಬ ಕಟ್ಟೆ
ಆಚಾರವೆಂಬ ಸೋಪಾನದಿಂದ
ಪರಮಾನಂದವೆಂಬ ಜಲವ ತುಂಬಿ
ಕೆರೆಯ ಕಟ್ಟಬಲ್ಲವರಾರನೂ ಕಾಣೆ
ನಾನುಕಟ್ಟಿದ ಕೆರೆ ಸ್ಥಿರವಾಯಿತ್ತು ಗುಹೇಶ್ವರಾ, ನಿಮ್ಮಾಣೆ.

ಸಿದ್ಧರಾಮ: ದೇವಾಲಯಗಳನ್ನು ನಿರ್ಮಿಸಿ, ಶಿವಲಿಂಗವನ್ನು ಪ್ರತಿಷ್ಠೆ ಮಾಡುವುದನ್ನು ಶಿವಾಗಮಗಳೂ ಒಪ್ಪುತ್ತಿವೆ. ಹಾಗಾದರೆ ಪರಮಾತ್ಮನ ಪೂಜೆ ಧ್ಯಾನಾದಿಗಳೂ ಕೂಡ ಕರ್ಮವೇ ಅಲ್ಲವೆ? ಅವುಗಳನ್ನು ಹೇಗೆ ತ್ಯಜಿಸುವುದು?

ಅಲ್ಲಮ: ಸಾಧಕನು ಕರ್ಮ ಮಾಡುವುದರಲ್ಲೇ ನಿರತನಾಗಿದ್ದರೆ ಅವನು ಮುಕ್ತನಾಗುವುದಿಲ್ಲ. ಕರ್ಮಯೋಗಿ ಸಿದ್ಧರಾಮ, ನೀನು ಮಹಾಯೋಗಿಯಾಗಬೇಕು, ಜ್ಞಾನಯೋಗಿಯಾಗಬೇಕು. ನಿನ್ನಲ್ಲಿ ದೇಹಗುಣವಳಿದು ಸರ್ವಸಮತಾಭಾವ ಮೂಡಬೇಕು. ಅದ್ವೈತಪ್ರಭೆಯಿಂದ ಶಿವಯೋಗದ ಅನುಭವ ಪಡೆಯಬೇಕು. ಇದಕ್ಕೆ ದೇಹಭಾವ, ಜೀವಭಾವವಳಿದು ಭಕ್ತಿಭಾವವುಂಟಾದಾಗ ಅರಿವು ಉಂಟಾಗಿ, ಮಾಯೆಯಿಂದ ಪಾರಾಗಿ ಬಂದಾಗ ಗುಹೇಶ್ವರ ಲಿಂಗದ ಅರಿವು ಸಾಧ್ಯವಾಗುವುದು. ಆದ್ದರಿಂದ ಯೋಗಿಯಾದ ನಿನ್ನ ಮನಸ್ಸನ್ನು ಕರ್ಮದ ಕೋಟಲೆಗೆ ಒಳಗು ಮಾಡದೆ ಆತ್ಮಾನುಸಂಧಾನದಲ್ಲಿ ನೆಲೆಗೊಳಿಸು.

ಸಿದ್ಧರಾಮ: (ಧನ್ಯತಾ ಭಾವದಿಂದ) ಪ್ರಭುವೇ, ನಿಮ್ಮ ಕರುಣೆಯಿಂದ ನನಗೀಗ ನನ್ನ ಬಾಳಿನ ನಿಜಧ್ಯೇಯದ ಅರಿವಾಯಿತು. ಕರ್ಮವು ಕರ್ಮಯೋಗವಾಗಿ ಅದನ್ನು ಮೀರಿದ ಶಿವಾದ್ವೈತದ ಅನುಭವ ಪಡೆದಾಗ ಕರ್ಮಲೇಪವಿರುವುದಿಲ್ಲ. ಪ್ರಭುವೇ, ಪರಬ್ರಹ್ಮಲಿಂಗದಲ್ಲಿ ಐಕ್ಯವಾಗುವ ಪರಿಯನ್ನು ಅನುಗ್ರಹಿಸಿ.

ಹೀಗೆ ಸಿದ್ಧರಾಮ ಪ್ರಾರ್ಥಿಸಿದಾಗ ಅಲ್ಲಮರು ಅತ್ಯಂತ ಕರುಣೆಯಿಂದ ಜೀವ-ದೇವರನ್ನು ಒಂದು ಮಾಡುವ ಶುದ್ಧಭಕ್ತಿಯನ್ನೂ, ಶಕ್ತಿಯನ್ನೂ ಅನುಗ್ರಹಿಸಿದ್ದಾರೆ. ಈ ದಿವ್ಯಾನುಭವವನ್ನು ಪಡೆದ ಸಿದ್ಧರಾಮ ಧನ್ಯನಾಗಿದ್ದಾನೆ.

### ೪. ಭಕ್ತಿಯೋಗ ಸಾಧಿಸಿದ ಬಸವೇಶ್ವರ

ಬಾಗೇವಾಡಿಯ ಮಾದರಸ ಮಾದಲಾಂಬಿಕೆಯರೆಂಬ ಶೈವ ಬ್ರಾಹ್ಮಣ ದಂಪತಿಗಳಿಗೆ ನಂದೀಶ್ವರನ ವರಪ್ರಸಾದದಿಂದ ಜನಿಸಿದ ಶಿಶುವೇ ಬಸವಣ್ಣ. ಕಾರಣಪುರುಷನಾದ ಬಸವಣ್ಣ ಗುರುಮುಖದಿಂದ ವೇದ, ಆಗಮ ಪುರಾಣಾದಿ ಶಾಸ್ತ್ರಗಳನ್ನು ಚೆನ್ನಾಗಿ ಅಧ್ಯಯನ ಮಾಡಿ ಪರಶಿವನನ್ನು ಸೇರಲು ಭಕ್ತಿಮಾರ್ಗವೇ ಸುಲಭಮಾರ್ಗವೆಂದು ತಿಳಿದು ಶಿವನನ್ನು ಭಕ್ತಿಯಿಂದ ಆರಾಧಿಸುತ್ತಿದ್ದಾನೆ. ಸಂಗಮ ಕ್ಷೇತ್ರದ ಕೂಡಲಸಂಗಮದೇವನೇ ಇವನ ಆರಾಧ್ಯ ದೈವ. ಈ ಸುಕ್ಷೇತ್ರದಲ್ಲಿ ಸಾಧನೆ ಮಾಡುತ್ತಿದ್ದಾಗ ಒಂದಿರುಳು ಸಂಗಮೇಶ್ವರನು ಕನಸಿನಲ್ಲಿತ್ತ ಆಜ್ಞಾನುಸಾರ ಬಿಜ್ಜಳನು ರಾಜ್ಯವಾಳುತ್ತಿದ್ದ ಕಲ್ಯಾಣವೆಂಬ ಕ್ಷೇತ್ರಕ್ಕೆ ಬಂದು ಅರಸನ ಅರಮನೆಯಲ್ಲಿ ಅಮಾತ್ಯನಾಗಿ ಕಾರ್ಯ ನಿರ್ವಹಿಸುತ್ತಿದ್ದಾನೆ. ಆ ರಾಜ್ಯದ ಮಂತ್ರಿಯ ಕುಮಾರಿಯರಾದ ಗಂಗಾಂಬಿಕೆ ಮತ್ತು ನೀಲಾಂಬಿಕೆಯರೊಡನೆ ಬಸವೇಶ್ವರನ ವಿವಾಹವಾಗಿದೆ.

ಸುವ್ಯವಸ್ಥಿತವಾದ ರಾಜ್ಯಭಾರದಲ್ಲಿ ಬಸವಣ್ಣ ಉನ್ನತವಾದ ಧರ್ಮಕಾರ್ಯಗಳನ್ನು ನಡೆಸುತ್ತಾ ನಾಡಿನ ಏಳ್ಗೆಯನ್ನು ಕಾಪಾಡುತ್ತಾ ಸಾಮಾನ್ಯ ಪ್ರಜೆಯೂ ಸುಖವಾಗಿರಲು ಬೇಕಾದ ಸೌಕರ್ಯಗಳನ್ನು ಒದಗಿಸುತ್ತಾ ಶಿವಭಕ್ತಿಯ ಪ್ರಚಾರಕಾರ್ಯವನ್ನೂ ಜೊತೆಜೊತೆಯಲ್ಲಿ ಮಾಡುತ್ತಿರುವ ಪರಿ ಅದ್ಭುತವಾಗಿದೆ.

ಕಳಕಳಿಸುತ್ತಿದ್ದ ಈ ಕಲ್ಯಾಣ ನಗರಿಯನ್ನು ಪ್ರಭುಗಳು ಸಿದ್ಧರಾಮನೊಡನೆ ಪ್ರವೇಶಿಸಿದ್ದಾರೆ. ಬಸವಣ್ಣನ ಮನೆಯ ಬಾಗಿಲಲ್ಲಿ ನಿಂತಿದ್ದ ಹಡಪದ ಅಪ್ಪಣ್ಣ ಇವರೀರ್ವರನ್ನು ಕಂಡಾಗ ಪರಶಿವನ ನಿರಾಕಾರ ಮತ್ತು ಸಾಕಾರ ರೂಪಗಳೆರಡೂ ಕಣ್ಮುಂದೆ ನಿಂತಂತಾಗಲು, ಒಡನೆಯೇ ಓಡಿ ಶಿವಪೂಜೆಯಲ್ಲಿ ನಿರತನಾಗಿದ್ದ ಬಸವಣ್ಣನಿಗೆ ನಿವೇದಿಸುತ್ತಿದ್ದಾನೆ. ಶಿವಪೂಜೆಗಿಂತ ಮುಖ್ಯವಾದುದು ಮತ್ತೊಂದಿಲ್ಲವೆಂದು ಬಗೆದಿದ್ದ ಬಸವಣ್ಣ ಎದ್ದು ಬಾರದೆ, ಕುಳಿತಲ್ಲಿಂದಲೇ ಅಪ್ಪಣ್ಣನನ್ನು ಕುರಿತು ಹೀಗೆ ಹೇಳುತ್ತಿದ್ದಾನೆ:

ಬಸವಣ್ಣ: ಅಪ್ಪಣ್ಣಾ, ಭಕ್ತನ ಪ್ರಾಣಾಭಿಮಾನಕ್ಕೆ ತಾನೇ ಕರ್ತನೆಂದು ಬಂದ ಜಂಗಮ, ಆ ಭಕ್ತನ ಮನೆಗೆ ತಾನೇ ಕರ್ತನಾಗಿ ಹೊಕ್ಕು ತನು ಮನ ಧನಗಳೆಲ್ಲವನ್ನು ಒಪ್ಪಿಸಿಕೊಂಡು ಆ ಭಕ್ತನನ್ನು ಪಾವನನನ್ನಾಗಿ ಮಾಡಬಲ್ಲವನೇ ಜಂಗಮ. ತನ್ನ ಮಠಕ್ಕೆ ತಾ ಬಾಹರೆ ಮುನಿಸುಂಟೆ? ಕೂಡಲಸಂಗನ ಶರಣರ ಮನೆಯ ಬಾಗಿಲು ಗಾಹಿ ನಾನಾಗಿರ್ದು ಕರ್ತರು ಗೃಹಕ್ಕೆ ಬಂದರೆ ಬೇಕು ಬೇಡೆನ್ನೆ — ಹೀಗೆಂದು ಹೇಳಿಬಾ.

ಅಪ್ಪಣ್ಣ ಬಸವಣ್ಣನ ಸಂದೇಶವನ್ನು ಅಲ್ಲಮನಿಗೆ ತಲುಪಿಸುತ್ತಿದ್ದಾನೆ.

ಅಲ್ಲಮ: (ಬಸವಣ್ಣನಿಗೆ) ಭಕ್ತಜಂಗಮದ ಸರಿಯಾದ ಸಂಬಂಧವನ್ನಾರು ಬಲ್ಲರು ಹೇಳಾ? ಅರ್ಥ ಪ್ರಾಣ ಅಭಿಮಾನವನ್ನು ಒಪ್ಪಿಸಿದಾತ ಭಕ್ತನಲ್ಲ. ಸತ್ಯಸದಾಚಾರವಿಲ್ಲದೆ ಭಕ್ತನ ಮನೆಗೆ ಹೋಗಿ ಪಾದಾರ್ಚನೆ ಮಾಡಿಸಿ, ಒಡಲ ಕಕ್ಕುಲತೆಗೆ ಹಣವ ಬೇಡಿ, ಕೊಟ್ಟರೆ ಕೊಂಡಾಡಿ ಕೊಡದಿದ್ದರೆ ದೂರಿಕೊಂಡು ಹೋಗುವಾತ ಜಂಗಮನಲ್ಲ. ಆದಿ ಅನಾದಿಯ ಮಹಾಘನವನ್ನು ಭೇದಿಸಿ, ಅನುಭವದಿಂದ ಅರಿತು, ದೇಹ ಜೀವದ ಹೊಲಿಗೆಯನ್ನು ಕಿತ್ತುಬಿಸುಟು ಶಿವನಿಗೆ ತನ್ನನ್ನೇ ಅರ್ಪಿಸಿಕೊಂಡು ಬಿಡುವವನೇ ನಿಜ ಭಕ್ತ. ಇಂತಹ ಭಕ್ತ ಜಂಗಮದ ಮಿಲನವೇ ನಿಜವಾದ ಮಿಲನ. ಮಿಕ್ಕಿದ ಅರೆಭಕ್ತರೊಡನೆ ಸಂಗ ಮಾಡುವುದು ನಮ್ಮ ಗುಹೇಶ್ವರ ಲಿಂಗಕ್ಕೆ ಸೊಗಸದು.

ಹೀಗೆ ಅಲ್ಲಮರು ಬಸವಣ್ಣನಿಗೆ ಭಕ್ತ ಮತ್ತು ಜಂಗಮ ತತ್ವದ ಸ್ವರೂಪವನ್ನು ವಿವರಿಸಿ ಹೇಳಿದರೂ ಬಸವಣ್ಣನ ಅಹಂಕಾರ ಇಳಿಯುತ್ತಿಲ್ಲ. ಇವೆಲ್ಲವನ್ನೂ ಗಮನಿಸುತ್ತಿದ್ದ ಚನ್ನಬಸವಣ್ಣನಿಗೆ ಬಸವಣ್ಣ ಮಾಡುತ್ತಿರುವ ತಪ್ಪು ಅರಿವಾಗುತ್ತಿದೆ. ಪರಶಿವಲಿಂಗಸ್ವರೂಪೀ ಗುರುವೇ ಮನೆಯ ಬಾಗಿಲಲ್ಲಿ ನಿಂತಿರುವಾಗ ಒಡನೆಯೇ ಎದ್ದು ಅವರನ್ನು ವಂದಿಸಿ, ಸ್ವಾಗತಿಸಿ, ಒಳಗೆ ಕರೆತರಬೇಕೆಂದು ಬಸವಣ್ಣನಿಗೆ ಸಮಯೋಚಿತವಾಗಿ ಕರ್ತವ್ಯಪ್ರಜ್ಞೆಯನ್ನುಂಟು ಮಾಡುತ್ತಿದ್ದಾನೆ. ಪ್ರಭುದೇವರೂ ಸಿದ್ಧರಾಮನೂ ಬಂದು ಬಾಗಿಲಲ್ಲಿ ನಿಂತಿರುವಾಗ 'ಕಣ್ಣರಿಯದಿದ್ದರೂ ಕರುಳರಿಯಬೇಡವೇ' ಎಂದು ಎಚ್ಚರಿಸುತ್ತಿದ್ದಾನೆ. ಈಗ ಬಸವಣ್ಣನಿಗೆ ತನ್ನ ತಪ್ಪಿನ ಅರಿವಾಗುತ್ತಿದೆ. ಅವನು ಒಡನೆಯೇ ಪೂಜಾಗೃಹದಿಂದೆದ್ದು ಬಂದು ಅಲ್ಲಮರ ಚರಣಗಳಿಗೆರಗಿ ಕ್ಷಮೆ ಯಾಚಿಸುತ್ತಾ, ತಾನು ಮಹಾಭಕ್ತನೆಂದು ಬೀಗಿ ಬಾಗಿಲಲ್ಲಿ ನಿಂತಿದ್ದ ಜಂಗಮನಿಗೆ ಅಪಚಾರವೆಸಗಿದೆನೆಂದು ದುಃಖಿಸುತ್ತಿದ್ದಾನೆ.

ಅಲ್ಲಮ: ಜಂಗಮವೇ ಹೊರಗಿರಲು ಲಿಂಗಾರ್ಚನೆ ಆವುದಯ್ಯಾ? ಪ್ರಾಣವ ಹೊರಗಿರಿಸಿ ಎಡೆಯಾಡುವ ದೇಹವುಂಟೆ? ಶರಣರು ಬಂದು ಬಾಗಿಲಲ್ಲಿ ನಿಂದಿರಲು ತನ್ನ ತಾ ಮರೆದವರ ಕಂಡರೆ ನಮ್ಮ ಗುಹೇಶ್ವರಲಿಂಗ ಒಡೆಯ ಹಾಯದೆ ಮಾಣ್ಬನೆ?

ಬಸವಣ್ಣ: (ಮನಸ್ಸಿನಲ್ಲಿ) ಇಷ್ಟು ದಿನವೂ ನಾನು ಮಾಡಿದ ಲಿಂಗಾರ್ಚನೆ ಇಂದು ಬಾಗಿಲಲ್ಲಿ ನಿಂತಿದ್ದ ಜಂಗಮನಿಗೆ ಅಪಚಾರ ವೆಸಗಿದುದರಿಂದ ಎಲ್ಲವೂ ವ್ಯರ್ಥವಾಯಿತು. ಹಾಲು ತುಂಬಿದ ಕೊಡವನ್ನು ಎತ್ತಿಹಾಕಿದಾಗ ಮತ್ತೆ ಹಾಲು ಸಿಗುವುದೆ? ಬಾಗಿಲಲ್ಲಿ ನಿಂತಿದ್ದ ಜಂಗಮನನ್ನು ಉದಾಸೀನ ಮಾಡಿ ಮತ್ತೆ ಪುರಸ್ಕರಿಸುವುದೆಂದರೆ ಅದಕ್ಕೆ ಕ್ಷಮೆ ಉಂಟೆ?

(ಅಲ್ಲಮರಿಗೆ) ಪ್ರಭು, ನಾನು ಮರವೆಯ ಮರುಳು. ನೀನು ಅರಿವಿನ ತಿರುಳು. ತಿಳಿವೊಡೆ ನಾನು ರಂಜಕನು, ಅಖಿಳರರಿಯಲು ನೀನು ನಿರಂಜಕನು. ನಾನು ಭಾವಿಸೆ ಪಶು, ವಿಚಾರಿಸಲು ನೀನು ಪಶುಪತಿ. ಎನ್ನ ತಪ್ಪನು ನೀನೇ ತಿದ್ದುವುದು.

(ಎಂದು ಹೇಳುತ್ತಾ ಅಲ್ಲಮರ ಚರಣಗಳಿಗೆರಗುತ್ತಿದ್ದಾನೆ)

ಕಿನ್ನರಿ ಬೊಮ್ಮಯ್ಯ: (ಸಾಕ್ಷಾತ್ ಶಿವಸ್ವರೂಪೀ ಅಲ್ಲಮರನ್ನು ಕುರಿತು) ಪ್ರಭುವೇ, ತನ್ನ ಶರೀರವೇ ಲಿಂಗ, ತನ್ನ ಪ್ರಾಣವೇ ಜಂಗಮ ಎಂಬ ಶಿವಾನುಭವವನ್ನು ಬಸವಣ್ಣ ಪಡೆದಿದ್ದಾನೆ. ಆತನು ನಿಮ್ಮಲ್ಲಿ ಯಾವ ಭಿನ್ನ ಭಾವವನ್ನು ಕಂಡವನಲ್ಲ , ಮನ್ನಿಸಿ ಕೃಪೆ ಮಾಡಬೇಕು.

ಚನ್ನಬಸವಣ್ಣ: ಪ್ರಭುವೇ, ಮಕ್ಕಳಲ್ಲಿ ದೋಷಗಳನ್ನು ಕಂಡು ತಾಯಿತಂದೆಯರು ಬೇಸರಿಸುತ್ತಾರೆಯೆ? ಬಸವಣ್ಣನಿಗೆ ತಂದೆ ನೀನು ತಾಯಿ ನೀನು. ಆತನಲ್ಲಿ ವಾತ್ಸಲ್ಯ ತೋರಿ ಕ್ಷಮಿಸಬೇಕು.

ಅಲ್ಲಮ: (ಸಿದ್ಧರಾಮನಿಗೆ) ನೋಡಿದೆಯಾ ಸಿದ್ಧರಾಮ, ಬಾಗಿಲಲ್ಲಿ ಜಂಗಮ ತಾನೇ ಬಂದಾಗ ನಿರ್ಲಕ್ಷ್ಯ ಮಾಡಿ ಈಗ ಎಲ್ಲರೂ ಜಾಣತನದಿಂದ ನಮ್ಮನ್ನು ಒಲಿಸಲು ಪ್ರಯತ್ನಿಸುತ್ತಿದ್ದಾರೆ!

ಸಿದ್ಧರಾಮ: ಪ್ರಭುವೇ, ಸಮಸ್ತ ಭಕ್ತರನ್ನು ಉದ್ಧರಿಸಲೆಂದೇ ಜಂಗಮಮೂರ್ತಿಯಾಗಿ ಸಂಚರಿಸುತ್ತಿರುವೆ. ಭಕ್ತರ ತಪ್ಪುಗಳನ್ನೆಣಿಸದೆ ಕರುಣೆಯಿಂದ ಅವರನ್ನು ಕಾಯಬೇಕು.

ಅಲ್ಲಮ: (ಸ್ವಗತ) ಬಸವಣ್ಣನನ್ನು ಪುಟವಿಕ್ಕಿದ ಚಿನ್ನವನ್ನಾಗಿ ಮಾಡಬೇಕು. (ಬಸವಣ್ಣನಿಗೆ) ಸಂಗನ ಬಸವಣ್ಣ, ಮಾಟಕೂಟವೆಂಬ ಕೀರ್ತಿಗೆ ಸಿಲುಕಿ ಜಂಗಮವೇ ಲಿಂಗವೆಂಬುದನ್ನು ಮರೆತೆಯಲ್ಲ. ಗುಹೇಶ್ವರನ ಶರಣರಿಗೆ ತ್ರಿಕರಣವನ್ನೊಪ್ಪಿಸಿದಲ್ಲದೆ ಭಕ್ತನಾಗಬಾರದು ಕಾಣಾ!

ಬಸವಣ್ಣ: (ಆತ್ಮಾರ್ಪಣೆ ಮಾಡುತ್ತಾ) ತನುವಬೇಡಿದೊಡೀವೆ, ಮನವ ಬೇಡಿದೊಡೀವೆ, ಧನವ ಬೇಡಿದೊಡೀವೆ, ಎನಗೆ ಬೇಕೆಂಬ ಭಾವ ಮನದಲ್ಲಿ ಹೊಂದಿದ್ದರೆ ಕೂಡಲಸಂಗನು ನನ್ನನ್ನು ಭವ ಘೋರದಲ್ಲಿಡಲಿ.

### ೫. ಗುಪ್ತ ಭಕ್ತಿಯ ಮರುಳಶಂಕರದೇವ

ಬಸವಣ್ಣನಿಗೆ ಮಾರ್ಗದರ್ಶನ ನೀಡಿದ ಮೇಲೆ, ಬಸವಣ್ಣನ ಅತಿ ಸಮೀಪದಲ್ಲೇ ವಾಸಿಸುತ್ತಿರುವ ಶಿವಯೋಗಿ ಮರುಳಶಂಕರ ದೇವನ ಇರವು ಪ್ರಭುಗಳ ಸೂಕ್ಷ್ಮಬುದ್ಧಿ ಮನಸ್ಸು ಆತ್ಮಗಳಿಗೆ ಗೋಚರವಾಗುತ್ತಿದೆ. ಬಸವಣ್ಣನ ಮಹಾಮನೆಯ ಅಂಗಳದಲ್ಲಿದ್ದ

ಪ್ರಸಾದಕುಂಡದಿಂದ ಪ್ರಭುಗಳ ದರ್ಶನ ಭಾಗ್ಯಕ್ಕಾಗಿ ಹಂಬಲಿಸುತ್ತ ಮೇಲೇರಿಬಂದ ಮರುಳಶಂಕರದೇವ. ಹನ್ನೆರಡು ವರ್ಷಗಳಿಂದ ಆಳವಾದ ಸಾಧನೆಯಲ್ಲಿ ನಿರತನಾಗಿ ಪರಶಿವನ ನಿಜತತ್ತ್ವದ ಅರಿವನ್ನು ಪಡೆದಿದ್ದ ಮಹಾನುಭಾವ ಶಂಕರದೇವ. ಮನೆಯ ಅಂಗಳದಲ್ಲೇ ನೆಲೆಸಿದ್ದ ಈ ಶಿವಯೋಗಿಯನ್ನು ಬಸವಣ್ಣ ಗುರುತಿಸಿರಲಿಲ್ಲ. ಆದರೆ ಜ್ಞಾನಚಕ್ಷುವಿಗೆ ಆತ್ಮನ ನಿಲುವು ತೋರಿದಂತೆ ಪ್ರಭುಗಳ ಸೂಕ್ಷ್ಮಮತಿಗೆ ಒಡನೆಯೇ ಗೋಚರಿಸಿದ ಈ ಶಂಕರದೇವ. ಅಲ್ಲಮ ಪ್ರಭುಗಳನ್ನು ಕಾಣುತ್ತಲೇ ಪೌರ್ಣಮಿಯ ಚಂದ್ರನ ಉದಯಕ್ಕೆ ಸಾಗರವು ಮೆಲ್ಲನೆ ಮುಂದಕ್ಕುಬ್ಬಿ ನಡೆದು ಬರುವಂತೆ ಮರುಳ ಶಂಕರದೇವ ಎದ್ದು ಬಂದಾಗ ಅಲ್ಲಮರು ಅವನನ್ನು ಬಸವಣ್ಣನಿಗೆ ಪರಿಚಯ ಮಾಡಿಕೊಡುತ್ತಾರೆ.

ಬಸವಣ್ಣ: (ಮನಸಿನಲ್ಲಿ) ಹನ್ನೆರಡು ವರ್ಷಗಳಿಂದ ನಮ್ಮ ಮನೆಯ ಅಂಗಳದಲ್ಲೇ ಶಿವಯೋಗದಲ್ಲಿದ್ದ ಈ ಮಹಾನುಭಾವನನ್ನು ನಾನು ಅರಿಯದೆ ಹೋದೆನಲ್ಲಾ!

ಅಲ್ಲಮ: ಕಾಮದಿಂದ ಕಂಗೆಡದೆ, ಕ್ರೋಧದಿಂದ ಮುಂಗೆಡದೆ,
ಲೋಭಕ್ಕೆ ಒಳಗಾಗದೆ, ಮೋಹದ ಬಲೆಗೆ ಬೀಳದೆ,
ಮದ ಮತ್ಸರಗಳನ್ನು ಹೊಂದದೆ
ಲಿಂಗಪ್ರಸಾದ ಪ್ರೇಮಿಯಾಗಿದ್ದನು.
ಪಂಚೇಂದ್ರಿಯಗಳನ್ನು ನಿಗ್ರಹಿಸಿ
ಆತ್ಮಸಂಯಮದಿಂದ ಶಿವನನ್ನೇ ನಂಬಿದ
ಮಹಾತ್ಮ ಈ ಮರುಳಶಂಕರದೇವ!

ಎಂದು ಹೇಳಿ ಅಲ್ಲಮರು ಅವನ ಮೈದಡವಿ ಅನುಗ್ರಹಿಸಿದರು.

### ೬. ಮಧುರ ಭಕ್ತಿಯ ಮಹಾದೇವಿಯಕ್ಕ

ಉಡುತಡಿಯ ಶಿವಭಕ್ತ ದಂಪತಿಗಳಿಗೆ ಜನಿಸಿದ ಮಹಾದೇವಿ ಬೆಳೆದು ಯೌವನಕ್ಕೆ ಕಾಲಿಟ್ಟಾಗ ಶಿವಾನುರಾಗದಿಂದ ಅವಳ ಅಂತಃ ಸೌಂದರ್ಯ ಅರಳಿದಂತೆಯೇ ಬಾಹ್ಯ ಸೌಂದರ್ಯವೂ ಸುಂದರವಾಗಿ ಅರಳಿತ್ತು. ಆ ಊರಿನ ಅರಸ ಕೌಶಿಕ ಒಮ್ಮೆ ನಗರ ಸಂಚಾರ ಮಾಡುತ್ತಿದ್ದಾಗ ಮಹಾದೇವಿಯಕ್ಕನನ್ನು ಆಕಸ್ಮಿಕವಾಗಿ ಕಂಡು, ಅವಳ ಸೌಂದರ್ಯಕ್ಕೆ ಮಾರುಹೋಗಿ ಕಾಮಮೋಹಿತನಾಗುತ್ತಾನೆ. ಅನಿವಾರ್ಯ ಸಂದರ್ಭಗಳಿಂದಾಗಿ ಅಕ್ಕನ ವಿವಾಹ ಕೌಶಿಕನೊಡನೆ ಜರುಗಿ ಅಕ್ಕ ಅರಮನೆಯ ಅರಸಿಯಾಗುತ್ತಾಳೆ. ಆದರೆ ಬಾಲ್ಯದಿಂದಲೂ ಜಗತ್ಪತಿಯಾದ ಜಗದೀಶನನ್ನೇ ತನ್ನ ಪತಿಯಾಗಿ ಸ್ವೀಕರಿಸಿದ್ದ ಅಕ್ಕ ಅರಮನೆಯ ಯಾವ ವೈಭೋಗಗಳಿಗೂ ಮಣಿಯದೆ ವಿರಕ್ತ ಜೀವನ ನಡೆಸುತ್ತಾ, ಶಿವಭಕ್ತರೊಡನೆ ಸತ್ಸಂಗ ನಡೆಸುತ್ತಾ ಇದ್ದಾಳೆ. ಇವಳ ಭಕ್ತಿ ಪರಾಕಾಷ್ಠೆಗೆ ತಲುಪುತ್ತಲೇ ಅರಸುಮನೆಯನ್ನು ತ್ಯಜಿಸಿ ಶಿವಭಕ್ತಿ ಶಿವಜ್ಞಾನಗಳಿಗೆ ಪ್ರಸಿದ್ಧವಾಗಿದ್ದ ಕಲ್ಯಾಣನಗರಿಗೆ ಅಲ್ಲಮಪ್ರಭುದೇವರ ದರ್ಶನಕ್ಕಾಗಿ ಕಾತರಳಾಗಿ ಬರುತ್ತಾಳೆ. ಶಿವಾನುಭವ ಮಂಟಪದಲ್ಲಿ ನಾನಾ ರೀತಿಯ ಪರೀಕ್ಷೆಗಳಿಗೆ ಗುರಿಯಾಗುತ್ತಾಳೆ. ಶ್ರೀಶೈಲದ ಚೆನ್ನಮಲ್ಲಿಕಾರ್ಜುನನೇ ತನ್ನ ಪತಿ ಎಂಬ ಆಕೆಯ ಏಕನಿಷ್ಠೆಯ ಭಕ್ತಿಯನ್ನೂ ಹೃದಯದ ಪರಿಪಕ್ವತೆಯನ್ನೂ ಇತರ ಶರಣರಿಗೆ ಪರಿಚಯಿಸಲು ಅಲ್ಲಮರು ಅನುಗ್ರಹಿಸುವ ಪರಿ ಹೀಗಿದೆ:

ಅಲ್ಲಮ:

ಉದಮದದ ಯೌವನವನೊಳಗೊಂಡ ಸತಿ ನೀನು
ಇತ್ತಲೇಕೆ ಬಂದೆಯವ್ವಾ
ಸತಿಯೆಂದರೆ ಮುನಿವರು ನಮ್ಮ ಶರಣರು
ನಿನ್ನ ಪತಿಯ ಕುರುಹು ಹೇಳಿದರೆ ಬಂದು ಕುಳ್ಳಿರು
ಅಲ್ಲದಿರ್ದೊಡೆ ತೊಲಗು ತಾಯೆ
ನಿನ್ನ ಪತಿಯ ಕುರುಹ ಹೇಳವ್ವಾ

ಅಕ್ಕ:

ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ಆನೊಲಿದೆ
ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ
ಕುರುಹಿಲ್ಲದ ಚೆಲುವಂಗಾನೊಲಿದೆ
ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೆ ನಾನೊಲಿದೆ
ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವನೇ ಗಂಡನೆನಗೆ
ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯಾ ಪ್ರಭುವೇ

ಅಲ್ಲಮ: ಕೂಡಲಿಲ್ಲದ ಘನವ ಕೂಡುವ ಪರಿ ಎಂತವ್ವಾ? ಗುಹೇಶ್ವರ ಲಿಂಗವ ಬೇರೆಮಾಡಿ ಬೆರಸುವ ಪರಿ ಎಂತು ಹೇಳಾ?

ಅಲ್ಲಮ ಗುರುವಿನ ಆಣತಿಯಂತೆ ಕಲ್ಯಾಣದಿಂದ ಹೊರಟ ಅಕ್ಕ ಮಹಾದೇವಿ ಶ್ರೀಶೈಲದ ಕದಳೀವನವನ್ನು ಸೇರಿ ಸಾಧನೆಗೈದು, ತನ್ನ ಪತಿ ಜಗತ್ಪತಿ ಚೆನ್ನಮಲ್ಲಿಕಾರ್ಜುನನನ್ನು ಕಣ್ಣಾರೆ ಕಂಡು ವಾರಿಕಲ್ಲು ವಾರಿಯ ಬೆರೆತಂತೆ ಪರಶಿವನಲ್ಲಿ ಐಕ್ಯಳಾಗುತ್ತಾಳೆ.

### ೭. ಕುಟಿಲಸಿದ್ಧ ಗೋರಕ್ಷ

ಅಲ್ಲಮಪ್ರಭುದೇವರು ಕಲ್ಯಾಣದಿಂದ ಹೊರಟು ಶ್ರೀಶೈಲ ಕ್ಷೇತ್ರಕ್ಕೆ ಬಂದಾಗ ಗೋರಕ್ಷನೆಂಬ ಕುಟಿಲಸಿದ್ಧನನ್ನು ನೋಡುತ್ತಾರೆ. ಅವನು ತನ್ನ ಅನೇಕ ವರ್ಷಗಳ ಸಾಧನೆಯ ಬಲದಿಂದ ವಜ್ರದೇಹಿಯಾಗಿದ್ದಾನೆ. ಯಾವ ಆಯುಧವೂ ಅವನ ಶರೀರವನ್ನು ಘಾತಿಸಲಾರದು. ಇಂತಹ ಪರಮಸಿದ್ಧಿಯನ್ನು ಪಡೆದ ತನಗೆ ಸಮಾನರಾರೂ ಇಲ್ಲ ಎಂಬ ಅಹಂಕಾರದಿಂದ ಬೀಗುತ್ತಿದ್ದಾನೆ. ಅಲ್ಲಮರು ಪರಮ ಕರುಣೆಯಿಂದ ಅವನನ್ನು ಋಜುಮಾರ್ಗಕ್ಕೆ ಕರೆತರಲು ಸಂಕಲ್ಪಿಸಿ ಗೋರಕ್ಷನ ಗುಹೆಗೆ ಬರುತ್ತಾರೆ. ಮದದಿಂದ ತುಂಬಿದ್ದ ಆ ಸರ್ವಭಕ್ಷ ಗೋರಕ್ಷನಿಗೆ ಪ್ರಭುಗಳ ಹಿರಿಮೆಯ ಅರಿವಿಲ್ಲ. ಹಮ್ಮಿನಿಂದ 'ಶರಣು' ಎಂದನೇ ಹೊರತು ಭಕ್ತಿಯಿಂದ ವಂದಿಸುತ್ತಿಲ್ಲ. ಅವರನ್ನು ಉಚಿತ ರೀತಿಯಲ್ಲಿ ಸನ್ಮಾನಿಸುತ್ತಿಲ್ಲ. ಮಾತುಕತೆ ನಡೆಯುತ್ತಲೇ, ಬಂದಿರುವವರು ಅಲ್ಲಮಪ್ರಭುದೇವರು ಎಂದು ತಿಳಿದುಬಂದರೂ ಅಹಂಕಾರ ಅಡ್ಡ ಬಂದುದರಿಂದ ಅವರನ್ನೇ ಪ್ರಶ್ನಿಸತೊಡಗಿದ್ದಾನೆ:

ಗೋರಕ್ಷ: ಯಾವ ಕಡೆಯಿಂದ ನೀವು ಬಿಜಯ ಮಾಡಿದಿರಿ? ನನ್ನ ವಾಸಸ್ಥಾನಕ್ಕೆ ಬಂದ ಕಾರಣವೇನು?

ಅಲ್ಲಮ: ಒಡಲಿನಾಸೆಗೆ ಕುದಿದು ಕಷ್ಟಪಡುವವರ ಕಳವಳವನ್ನು ಕಳಚಲು ನಾವು ನಡೆದು ಬಂದೆವು ಗೋರಕ್ಷ.

ಗೋರಕ್ಷ: ನಿಮ್ಮ ರೀತಿ ಸ್ವಲ್ಪ ಹೊಸದಾಗಿದೆ. ನಿಮ್ಮಂತಸ್ಥವನ್ನು ನಿಧಾನಿಸಿ ಹೇಳಿ. ಅದು ನಿಲುಕದೆಮ್ಮ ಮತಿಗೆ.

ಅಲ್ಲಮ: ತನ್ನನ್ನು ತಾನರಿಯದ ಮಂದಮತಿಗೆ ಇತರರ ಯೋಗ್ಯತೆಯ ಪರಿಚಯವಾದರೂ ಆಗುವ ಬಗೆ ಹೇಗೆ, ಕಣ್ಣು ಕಾಣದ ಕುರುಡ ಕನ್ನಡಿ ಹಿಡಿದಂತೆ!

ಗೋರಕ್ಷ: (ಕೋಪದಿಂದ) ನನ್ನ ಸಾಧನಾಬಲದಿಂದ ನನ್ನ ಶರೀರ ವಜ್ರಸದೃಶವಾಗಿದೆ. ಇದನ್ನು ಭೇದಿಸಲು ಯಾರಿಂದಲೂ ಸಾಧ್ಯವಿಲ್ಲ. ನನ್ನ ಶಕ್ತಿಯ ಪರಿಚಯ ನಿನಗೆಲ್ಲಿದೆ?

ಅಲ್ಲಮ: ದೇಹವೇ ತಾನೆಂದು ತಿಳಿದಿರುವ ನೀನು ನಿನ್ನನ್ನು ನೀನು ಅರಿಯುವುದಾದರೂ ಎಂತು? ತೊಗಲು ಮಲ ಮೂತ್ರ ನೆತ್ತರಿನಿಂದ ಕೊಳಚೆಯಾಗಿರುವ ಈ ಒಡಲೇ ನೀನಾಗಲು ಸಾಧ್ಯವೆ?

ಗೋರಕ್ಷ: (ಮನಸ್ಸಿನಲ್ಲಿ) ಯಾವನೋ ಈ ಬಡಜೋಗಿ ನನ್ನ ಸಾಧನೆಯನ್ನು ಅಲ್ಲಗಳೆದು ನನ್ನನ್ನು ಹೀಯಾಳಿಸಿ ಮಾತನಾಡುತ್ತಿರುವನು. ನನ್ನ ಕಾಯದ ಶಕ್ತಿಯನ್ನು ಸಾಕ್ಷಾತ್ತಾಗಿ ತೋರಿಸಿದರೆ ಆಗ ನನ್ನ ಸಿದ್ಧಿಯನ್ನು ಒಪ್ಪಿಕೊಂಡಾನು. ವಜ್ರಕಾಯವಾದ ನನ್ನ ಈ ಶರೀರ ನಿತ್ಯವಾದುದು. ಇದನ್ನು ಈ ಸಾಮಾನ್ಯ ಜಂಗಮನೇನು ಬಲ್ಲ? (ಪ್ರಕಟವಾಗಿ) ಹಾಗಾದರೆ ನೀನು ಈ ಖಡ್ಗವನ್ನು ಬೀಸಿ ನನ್ನನ್ನು ಇರಿದು ಕೊಲ್ಲಲು ಪ್ರಯತ್ನಿಸಿ ನೋಡು?

ಇವನಿಗೆ ಇದರ ಮೂಲಕವೇ ಆತ್ಮಜ್ಞಾನವನ್ನುಂಟುಮಾಡಬೇಕು ಎಂದು ಯೋಚಿಸಿದ ಪ್ರಭು ಖಡ್ಗವನ್ನು ತೆಗೆದುಕೊಂಡು ತನ್ನ ಪೂರ್ಣ ಬಲದಿಂದ ಗೋರಕ್ಷನನ್ನು ಹೊಡೆಯುತ್ತಾನೆ. ಆಶ್ಚರ್ಯ! ನೆಲ ನಡುಗಿ ಶ್ರೀಗಿರಿಯ ಶಿಖರಗಳು ಸಿಡಿದು ಮುರಿದುದೇ ಹೊರತು ಗೋರಕ್ಷನ ಶರೀರದ ಒಂದು ಕೂದಲನ್ನೂ ಅದು ಕತ್ತರಿಸುತ್ತಿಲ್ಲ.

ಗೋರಕ್ಷ: (ನಗುತ್ತಾ) ಈಗ ತಿಳಿದು ಬಂತೇ ನನ್ನ ಕಾಯದ ಶಕ್ತಿ? ಸಿಡಿಲ ಹೊಡೆತಕ್ಕೆ ಸಮವಾಗಿದ್ದ ನಿನ್ನ ಪ್ರಹಾರ ನನ್ನನ್ನೇನೂ ಮಾಡಲಿಲ್ಲ. ಇದೇ ನಾನು ಹಲವು ವರ್ಷಗಳಿಂದ ಸಾಧಿಸಿದ ಶರೀರ ಸಿದ್ಧಿ.

ಅಲ್ಲಮ: (ಮನಸ್ಸಿನಲ್ಲಿ) ಈಗ ನನ್ನ ತತ್ತ್ವಬೋಧೆ ಫಲಿಸುವ ಕಾಲ ಕೂಡಿ ಬಂದಂತಿದೆ. (ಪ್ರಕಟವಾಗಿ) ಗೋರಕ್ಷ, ಇದೋ ಹಿಡಿದುಕೋ ನಿನ್ನ ಖಡ್ಗವನ್ನು. ಈಗ ನೀನು ನಿನ್ನ ಸರ್ವಶಕ್ತಿಯನ್ನು ಪ್ರಯೋಗಿಸಿ ನಮ್ಮ ಮೇಲೆ ಪ್ರಹಾರಮಾಡು.

ಗೋರಕ್ಷ: (ಮನಸ್ಸಿನಲ್ಲಿ) ಇವನೇನೂ ವಜ್ರಕಾಯದ ಸಿದ್ಧನಲ್ಲ. ಇವನ ಶಕ್ತಿಯನ್ನೂ ಪರೀಕ್ಷಿಸಿಯೇ ಬಿಡೋಣ.

(ಗೋರಕ್ಷ ತನ್ನ ಶಕ್ತಿಯನ್ನೆಲ್ಲಾ ಪ್ರಯೋಗಿಸಿ ಖಡ್ಗವನ್ನು ಪ್ರಭುವಿಗೆ ಬೀಸಿ ಒಗೆಯುತ್ತಾನೆ)

ಇದೇನಿದು? ಖಡ್ಗವನ್ನು ಅಷ್ಟು ಜೋರಾಗಿ ಬೀಸಿದರೂ ಇವನಿಗೆ ಅದು ಸ್ವಲ್ಪವೂ ತಗುಲದೇ ಗಾಳಿಯಲ್ಲಿ ಬೀಸಿದಂತಾಯಿತಲ್ಲ. ಇವನ ಶರೀರಕ್ಕೆ ಅಲಗು ಸೋಂಕಲೇ ಇಲ್ಲ. ಇವನು ಸಾಮಾನ್ಯನಲ್ಲ, ಇವನಿಗೂ ಶರೀರ ಸಿದ್ಧಿ ಆಗಿರಲೇಬೇಕು. (ಪ್ರಕಟವಾಗಿ) ಪ್ರಭುವೇ, ನನ್ನ ಅಹಂಕಾರದಿಂದ ನಿನ್ನನ್ನು ಅರಿಯದೇ ಹೋದೆ. ಈ ಶರೀರ ಸಿದ್ಧಿಯನ್ನು ನೀನು ಸಾಧಿಸಿದಾದರೂ ಎಂತು?

ಅಲ್ಲಮ: ಶಿವಯೋಗದಲ್ಲಿರುವ ಎಲ್ಲ ಸಾಧಕರಿಗೂ ಈ ಎಲ್ಲ ಸಿದ್ಧಿಗಳೂ ತಾವಾಗಿಯೇ ಬಂದು ಸೇವಿಸುತ್ತವೆ. ಆದರೆ ಇದು ಸಾಧನೆಗೆ ಅಡಚಣೆಯೇ ಹೊರತು ಸಹಾಯಕವಲ್ಲ. ನಿಜಸಾಧಕ ಅವುಗಳ ಕಡೆಗೆ ಗಮನ ನೀಡದೆ ಶಿವಜ್ಞಾನವನ್ನು ಮಾತ್ರ ಬಯಸಬೇಕು. ಬಿದ್ದುಹೋಗುವ ಈ ಕಾಯದ ಮೋಹವನ್ನು ಕಳೆಯಬೇಕು. ನೀನು ಕುಟಿಲಮಾರ್ಗವನ್ನು ಬಿಟ್ಟು ಶಿವಪಥವನ್ನು ಹಿಡಿಯಬೇಕು.

ಗೋರಕ್ಷ: (ಪಶ್ಚಾತ್ತಾಪ ಪಡುತ್ತಾ) ದೇಹವೇ ನಾನೆಂಬ ನನ್ನ ಮೋಹ ಇಂದು ಕಳೆಯಿತು. ಇನ್ನು ಮುಂದಾದರೂ ನಿಜಮಾರ್ಗದಲ್ಲಿ ನಡೆಯಲು ದಾರಿ ತೋರಿ ಪ್ರಭುವೇ. ಅಸಾಧಾರಣ ಯೋಗಿಯಾದ ನಿಮ್ಮನ್ನು ಸಾಧಾರಣ ಜೋಗಿ ಎಂದು ತಿಳಿದುಕೊಂಡೆ, ತಪ್ಪಾಯಿತು ನನ್ನನ್ನು ಕ್ಷಮಿಸಿ. ಇನ್ನು ಮುಂದೆ ನೀವೇ ನನಗೆ ಗುರು. (ಕಾಲಿಗೆರಗುತ್ತಾನೆ).

ಅಲ್ಲಮ: ಗೋರಕ್ಷ, ಈಗ ನಿನ್ನ ಹೃದಯ ಪರಿಪಕ್ವವಾಗಿದೆ. ನಿಜ ತತ್ತ್ವದ ರಹಸ್ಯವನ್ನರಿತು ಮೋಕ್ಷ ಮಾರ್ಗದಲ್ಲಿ ಸಾಗು.

ಅಲ್ಲಮಪ್ರಭುಗಳು ಗೋರಕ್ಷನಿಗೆ ಅನುಗ್ರಹ ಮಾಡುತ್ತಲೇ ಅವನಿಗೆ ಆವರಿಸಿದ್ದ ಮಾಯೆ ಹರಿಯುತ್ತಿದೆ, ಅವನ ಹೃದಯದಲ್ಲಿ ಸಮ್ಯಕ್ ಜ್ಞಾನ ಜ್ಯೋತಿ ಬೆಳಗುತ್ತಿದೆ.

ಹೀಗೆ ಅಲ್ಲಮಪ್ರಭುಗಳ ಆಧ್ಯಾತ್ಮಪ್ರವಾಸ ಗೊಗ್ಗಯ್ಯನ ತೋಟದಿಂದ ಪ್ರಾರಂಭವಾಗಿ ಗೋರಕ್ಷನ ಶ್ರೀಗಿರಿಯವರೆಗೆ ಸಾಗಿತ್ತು. ಹಾದಿಯಲ್ಲಿ ಅನೇಕ ಶಿವಶರಣ ಶರಣೆಯರಿಗೆ ಅವರವರ ಕಾಯಕದ ಮೂಲಕವೇ ಕೈಲಾಸ ಸೇರುವ ಪರಿಯನ್ನು ಅವರವರ ಯೋಗ್ಯತೆಗೆ ಅನುಸಾರವಾಗಿ ಬೋಧಿಸುತ್ತಾ ನಡೆದ ಅಲ್ಲಮ ಪ್ರಭುಗಳು ಅಪರೂಪದ ಗುರು!

ಪ್ರಭುದೇವರು ಇಹಲೋಕದ ತನ್ನ ಎಲ್ಲ ಕರ್ತವ್ಯವನ್ನು ಮುಗಿಸಿ, ಶ್ರೀಶೈಲಗಿರಿಗೆ ನಡೆದು ಕದಳೀವನವನ್ನು ಸೇರಿ ಬಯಲಾದರು. ಶೂನ್ಯಸಿಂಹಾಸನವನ್ನೇರಿದ ವೈರಾಗ್ಯ ಚಕ್ರವರ್ತಿ ಪ್ರಭುದೇವರು ವಿಶ್ವಕುಟುಂಬಿ. ಸಾವಿರಾರು ವಚನಗಳಲ್ಲಿ ತತ್ತ್ವಗಳನ್ನು ತುಂಬಿ, ಸಾರಸ್ವತ ಲೋಕಕ್ಕೂ, ತತ್ತ್ವಲೋಕಕ್ಕೂ ಒಡೆಯರಾಗಿದ್ದಾರೆ. ಪರಮಾತ್ಮನ ಸಾಕ್ಷಾತ್ಕಾರದ ಅನುಭವವನ್ನು ಪಡೆಯುತ್ತಾ,

ಸ್ವಸ್ಥಾನ ಸುಸ್ಥಿರದ ಸುಮನಮಂಟಪದೊಳಗೆ ನಿತ್ಯ ನಿರಂಜನ ಪ್ರಭೆಯ ಬೆಳಕು

ಮಿಂಚಿನ ಬಳ್ಳಿಯ ಸಂಚರವ ಕಂಡಡೆ ಎನಗಿದು ಸೋಜಿಗವಾಯಿತ್ತು ಗುಹೇಶ್ವರಾ ನೀನು ಜ್ಯೋತಿರ್ಲಿಂಗವಾದಡೆ, ಉಪಮಿಸಿ ನೋಡಬಲ್ಲವರಿಲ್ಲಯ್ಯ

ಎಂದು ಗುಹೇಶ್ವರ ಲಿಂಗದ ಜ್ಯೋತಿಸ್ವರೂಪ ತಾನೇ ಎಂದು 'ಸೋಽಹಮಸ್ಮಿ' ಭಾವದಿಂದ ಪರಮಸುಖಿಯಾದರು. ❀

*ಗ್ರಂಥಋಣ:*

*೧. ಆತ್ಮಜ್ಞಾನಿ ಅಲ್ಲಮಪ್ರಭು — ಓ.ಎನ್. ಲಿಂಗಣ್ಣಯ್ಯ*

*೨. ಶೂನ್ಯ ಸಂಪಾದನೆ — ಡಾ. ಸಾ.ಶಿ. ಮರುಳಯ್ಯ*

*೩. ಅಲ್ಲಮಪ್ರಭುದೇವರ ವಚನ-ನಿರ್ವಚನ — ಶ್ರೀ ಸಿದ್ಧೇಶ್ವರ ಸ್ವಾಮಿಗಳು*

*೪. ಅಕ್ಕಮಹಾದೇವಿಯವರ ವಚನ ವ್ಯಾಖ್ಯಾನ — ಡಾ. ಸ್ವಾಮಿ ವಿಜಯಕುಮಾರ ಮಹಾನುಭಾವಿಗಳು*

# ದುಃಖ ಮತ್ತು ದುಃಖನಿವೃತ್ತಿಯ ಉಪಾಯ

ಮೂಲ ಹಿಂದೀ : **ಸ್ವಾಮಿ ಬ್ರಹ್ಮೇಶಾನಂದ**

ಅನುವಾದ : **ಮಾತಾ ತ್ಯಾಗಮಯೀ**

(ಹಿಂದಿನ ಸಂಚಿಕೆಯಿಂದ ಮುಂದುವರಿದಿದೆ)

**ಬೌದ್ಧಮತ :**

ಭಗವಾನ್ ಬುದ್ಧನ ಉಪದೇಶವು ದುಃಖದ ಸತ್ಯತೆ ಮತ್ತು ಅದರಿಂದ ಪಾರಾಗುವ ಉಪಾಯವನ್ನು ಆಧರಿಸಿದೆ. ಅವನ ಪ್ರಕಾರ ರೋಗ, ಜರೆ, ಮೃತ್ಯು — ಇವೆಲ್ಲವೂ ದುಃಖ. ಈ ದುಃಖಕ್ಕೆ ಕಾರಣವನ್ನು ಹುಡುಕುತ್ತ ಅವನು ಕಾರ್ಯ–ಕಾರಣ ನಿಯಮದ ಸರಪಳಿಯನ್ನೇ ಹುಡುಕಿ ತೆಗೆದನು. ಅದನ್ನು ''ಪ್ರತೀತ್ಯ ಸಮುತ್ಪಾದ'' ಎಂದು ಕರೆಯಲಾಗಿದೆ. ವಾಸನೆ ಅಥವಾ ತೃಷ್ಣೆಯೇ ದುಃಖಕ್ಕೆ ಕಾರಣ. ಅದರ ಮೂಲದಲ್ಲಿದೆ ಅಜ್ಞಾನ. ದುಃಖದಿಂದ ಪಾರಾಗಲು ಅಷ್ಟಾಂಗಮಾರ್ಗ ಎಂಬ ಸ್ಪಷ್ಟವಾದ ಸಾಧನಾಪಥವನ್ನು ಬುದ್ಧನು ಹೇಳಿರುವನು.

**ಸ್ಟೋಯಿಸಿಸಂ :**

ಸ್ಟೋಯಿಸಿಸಂ ಎಂಬ ಒಂದು ಆಶಾವಾದಿ ದಾರ್ಶನಿಕ ಮತವು ದುಃಖವನ್ನು ಕೆಡುಕು ಎಂದು ಒಪ್ಪುವುದಿಲ್ಲ. ಬದಲಾಗಿ ದುಃಖವನ್ನು ಹಗುರವಾಗಿ ತೆಗೆದುಕೊಂಡು, ಅವಿಚಲಿತರಾಗಿರುವಂತೆ ಕರೆ ನೀಡುತ್ತವೆ. ಅವರ ಪ್ರಕಾರ ಜಗತ್ತು ಶುಭವಾದುದು, ಪೂರ್ಣ ವಾದುದು. ಯಾವುದನ್ನು ನಾವು ದುಃಖ, ಅಶುಭ, ಕೆಡುಕು ಎಂದು ಹೇಳುತ್ತೇವೆಯೋ ಅದು ಕೇವಲ ಸಾಪೇಕ್ಷ ದೃಷ್ಟಿಯಿಂದ ಮಾತ್ರ ಕೆಡುಕು. ಚಿತ್ರದಲ್ಲಿ ಬಿಡಿಸಲ್ಪಟ್ಟ ನೆರಳು ಆ ಚಿತ್ರದ ಸೌಂದರ್ಯವನ್ನು ವೃದ್ಧಿಸುವಂತೆ ದುಃಖವೂ ಜೀವನ ಚಿತ್ರದ ಸೌಂದರ್ಯವನ್ನು ವರ್ಧಿಸುತ್ತದೆ. ವಿಶಾಲವಾದ ಅರ್ಥದಲ್ಲಿ ಜಗತ್ತು ಸುಂದರವೇ ಆಗಿದೆ. ಅಲ್ಲಿ ಪ್ರತಿಯೊಂದು ಸುಖ–ದುಃಖಕ್ಕೂ ಅದರದೇ ಆದ ಪಾತ್ರವಿದೆ. ಆದ್ದರಿಂದ ಯಾವುದೂ ಕೆಡುಕಲ್ಲ, ಅಶುಭವಲ್ಲ. ದುಃಖವು ಪ್ರಾಕೃತಿಕ ಕ್ರಿಯೆಗಳ ಅನಿವಾರ್ಯ ಪರಿಣಾಮವಾಗಿದೆ. ಅಮೃತವನ್ನು ಪಡೆಯುವ ಪ್ರಕ್ರಿಯೆಯಲ್ಲಿ ಮೊದಲು ವಿಷ ಹೊರಬಂದಂತೆ ಒಳಿತನ್ನು ಸಾಧಿಸುವ ಹಾದಿಯಲ್ಲಿ ಕೆಡುಕು ಅನಿವಾರ್ಯವಾಗಿ ಬರುತ್ತದೆ. ದುಃಖ ತಾನಾಗಿಯೇ ಕೆಟ್ಟದ್ದೂ ಅಲ್ಲ. ಏಕೆಂದರೆ ಚಾರಿತ್ರ್ಯದೊಂದಿಗೆ, ಜೀವನ ಮೌಲ್ಯಗಳೊಂದಿಗೆ ಅದಕ್ಕೆ ಏನೂ ಸಂಬಂಧವಿಲ್ಲ. ಮಾತ್ರವಲ್ಲ ಅದು ಸದ್ಗುಣಗಳನ್ನು ಹೆಚ್ಚಿಸುವಲ್ಲಿ ಸಹಾಯಕವಾಗಿದೆ. ಏಕೆಂದರೆ ಕಷ್ಟ, ದುರ್ಗುಣ ಮತ್ತು ದುಃಖವನ್ನು ದೂರ ಮಾಡಿದಾಗಲೇ ಸದ್ಗುಣಗಳು ಬೆಳಕಿಗೆ ಬರುವುವು. ಆದ್ದರಿಂದ ವಿವೇಕಪೂರ್ಣ, ಸದಾಚಾರದ ಜೀವನ ದಲ್ಲಿಯೇ ದುಃಖನಿವೃತ್ತಿ ಮತ್ತು ಸುಖಪ್ರಾಪ್ತಿಯ ಗುಟ್ಟು ಅಡಗಿದೆ. ನಾವು ಪ್ರಕೃತಿನಿಯಮಾನುಸಾರ ಬದುಕಲೆತ್ನಿಸಬೇಕು.

ಕ್ರೈಸ್ತ ಧರ್ಮದ ಪ್ರವರ್ತಕ ಏಸುಕ್ರಿಸ್ತನ ಜೀವನವು ದುಃಖ ಮತ್ತು ಹೋರಾಟದಿಂದ ತುಂಬಿದೆ. ಅವನ ಅಂತ್ಯವೂ ನೋವಿನಲ್ಲೇ ಆಯಿತು. ಅವನ ಜೀವನ ಸಂದೇಶಗಳನ್ನು ಆಧರಿಸಿ ಅನೇಕ ಮತ–ಸಿದ್ಧಾಂತಗಳು ಉದಯಿಸಿದವು.

೧) ಕ್ರಿಸ್ತನಿಗೆ ದುಃಖ ಚೆನ್ನಾಗಿ ಗೊತ್ತಿತ್ತು. ಅದನ್ನು ಅವನು ದರ್ಶನ ಅಥವಾ ಸಿದ್ಧಾಂತದ ರೂಪದಲ್ಲಿ ವಿವರಿಸಲು ಹೋಗಲಿಲ್ಲ. ಬದಲಾಗಿ ಮಾನವತೆಯ ಮೇಲಿನ ಪರಮ ಅನುಕಂಪೆಯಿಂದ ಅವರ ದುಃಖವನ್ನು ದೂರಮಾಡಲು ಪ್ರಯತ್ನಿಸಿದನು. ಅವನು ಪ್ರೇಮ, ಕರುಣೆ, ಸಹಾನುಭೂತಿ ಮತ್ತು ತ್ಯಾಗದಿಂದ ಜನರ ನೋವು–ದುಃಖಗಳನ್ನು ಪರಿಹರಿಸಲು ಪರಿಶ್ರಮಿಸಿದನು. ಅವರ ಈ ಹೋರಾಟದಲ್ಲಿ ಕ್ರಿಸ್ತನು ಸಹಾಯಕನಾಗಿದ್ದನು.

ಆದರೆ ಜನರೂ ಅವನೊಂದಿಗೆ ಕೈ ಜೋಡಿಸಬೇಕೆಂದು ಅವನ ಅಪೇಕ್ಷೆಯಾಗಿತ್ತು. ಅವನು ತಾನೊಬ್ಬನೇ ಕೆಡುಕಿನ ವಿರುದ್ಧ ಸೆಣಸುವುದಿಲ್ಲ. ಅವನ ಸ್ಪರ್ಶದಿಂದ ರೋಗಮುಕ್ತರಾದವರು, ದುಃಖವಿಮುಕ್ತರಾದವರು ಗುರಿಯತ್ತ ಹೆಜ್ಜೆಯಿಡುವಂತಾಯಿತು.

೨) ಕ್ರಿಸ್ತನು ಭಗವಂತನಲ್ಲಿ ಒಂದಾಗಿ ಭಗವತ್‌ಪದದಲ್ಲಿ ಪ್ರತಿಷ್ಠಿತನಾಗಿ, ಜೀವನದ ಸಮಸ್ಯೆಗಳನ್ನು ಪರಿಹರಿಸಿದನು. ನಾವೂ ಅಂತೆಯೇ ಭಗವಂತನಲ್ಲಿ ನೆಲಸಿ ದುಃಖಗಳಿಂದ ಪಾರಾಗಬೇಕು.

೩) Imitation of Christ ಅಥವಾ 'ಕ್ರಿಸ್ತನ ಅನುಸರಣೆ' ಎಂಬ ಪುಸ್ತಕದಲ್ಲೂ ಕ್ರಿಸ್ತನ ಜೀವನದ ದುಃಖವನ್ನು ದೃಷ್ಟಾಂತವಾಗಿ ನೀಡುತ್ತ ಕಷ್ಟ-ದುಃಖಗಳನ್ನು ಸ್ವಪ್ರೀತಿಯಿಂದ ಸ್ವೀಕರಿಸಬೇಕು ಎಂದು ಹೇಳಲಾಗಿದೆ. ಕ್ರಿಸ್ತನನ್ನು ಪ್ರೀತಿಸುವವನಿಗೆ ಕಷ್ಟ ಪ್ರಿಯವಾಗಬೇಕು. ಏಕೆಂದರೆ ಕ್ರಿಸ್ತನೇ ಅವನ್ನು ಸಹಿಸಿದ್ದಾನೆ. ಆ ಕಷ್ಟಗಳಲ್ಲೇ ಸುಖ, ಮುಕ್ತಿ ಮತ್ತು ಜೀವನದ ರಸ ಇದೆ. ಕಷ್ಟಸಹಿಷ್ಣುತೆಯಿಂದ ನಾವು ನಮ್ಮ ಭಗವಂತನಂತೆ ಆಗುತ್ತೇವೆ.

೪) ಕ್ರೈಸ್ತ ಧರ್ಮದ ಪ್ರಕಾರ ಪಾಪ ದುಃಖಕ್ಕೆ ಕಾರಣ. ಭಗವಂತನಿಂದ ವಿಮುಖನಾಗಿರುವುದನ್ನು Original Sin ಅಥವಾ ಆದಿಪಾಪ ಎಂದು ಕರೆಯಲಾಗಿದೆ. ದುಃಖ ಒಂದು ದಂಡದ ವಿಧಾನ. ಅದು ನಮ್ಮ ಒಳಿತಿಗಾಗಿಯೇ. ಆದ್ದರಿಂದ ಅದನ್ನು ಕೆಡುಕೆಂದು ಬಗೆಯದಿರಿ. ಭಗವಂತನಲ್ಲಿ ಒಂದಾಗಿರಿ. ಆಗ ಎಲ್ಲವೂ ಸರಿಹೋಗುತ್ತದೆ. ದುಃಖಗಳಿಂದ ತಲ್ಲಣಿಸದಿರಿ. ಏಕೆಂದರೆ ದುಃಖ ದಲ್ಲಿ ಕ್ರಿಸ್ತ ನಿಮ್ಮೊಡನಿದ್ದಾನೆ. ಅವನು ಸದಾ ನೀವು ಕಷ್ಟ ಸಹಿಷ್ಣುಗಳಾಗುವಂತೆ ನಿಮ್ಮೊಡನಿರುತ್ತಾನೆ.

### ಭಾರತೀಯ ದರ್ಶನದ ಮಾರ್ಗದರ್ಶನ

ಅನಾದಿ ಕಾಲದಿಂದ ಭಾರತದಲ್ಲೂ ಮನೀಷಿಗಳು ದುಃಖವನ್ನು ಕುರಿತಂತೆ ಗಾಢವಾಗಿ ಚಿಂತನೆಯನ್ನು ಮಾಡಿದ್ದಾರೆ. ಭಾರತದ ದರ್ಶನವನ್ನು ಸಾಮಾನ್ಯವಾಗಿ ನಿರಾಶಾವಾದಿ ಎಂದು ಪರಿಗಣಿಸಲಾಗಿದೆ. ಏಕೆಂದರೆ ಅದು ಜಗತ್ತನ್ನು ದುಃಖಮಯ ಅವಿದ್ಯೆಯಿಂದ ಜನಿಸಿದ ಬಂಧನ ಎಂದು ಬಗೆಯುತ್ತದೆ. ಇದು ಭಾರತೀಯ ಚಿಂತನೆಯ ಮೂಲವಾದರೂ ಅದಕ್ಕೊಂದು ಆಶಾವಾದಿ ಸಕಾರಾತ್ಮಕ ಮುಖವೂ ಇದೆ. ವ್ಯಕ್ತಿಯು ಜೀವನದಲ್ಲಿ ಎಚ್ಚರಗೇಡಿಯಾಗಿ, ಪ್ರಮಾದವಶನಾಗಿ ಇರುತ್ತಾನೆ ಮತ್ತು ಅವನು ತನ್ನ ಅಸಂಖ್ಯ ವಾಸನೆಗಳ ಬಿಗಿಮುಷ್ಟಿಯಲ್ಲಿ ಕೈಗೊಂಬೆಯಂತಾಗಿರುವುದರಿಂದ ಮತ್ತೆ ಮತ್ತೆ ದುಃಖವಶನಾಗುತ್ತಿರುತ್ತಾನೆ. ಭಾರತದ ಋಷಿಗಳು ದುಃಖದ ಕಾರಣವನ್ನು ಹೀಗೆ ವಿವರಿಸಿದ್ದಾರೆ:

ಭಾರತದ ದಾರ್ಶನಿಕರು ಒಂದು ಶಾಶ್ವತವಾದ ನೈತಿಕ ನಿಯಮವನ್ನು ನಂಬುತ್ತಾರೆ. ಅದನ್ನು ಋತ ಎಂದು ಕರೆಯಲಾಗಿದೆ. ಅದನ್ನೇ ಮೀಮಾಂಸಕರು ಅಪೂರ್ವ ಎಂದು, ನೈಯಾಯಿಕರು ಅದೃಷ್ಟ ಎಂದು, ವೇದಾಂತಿಗಳು ಕರ್ಮ ಎಂದು ಕರೆಯುತ್ತಾರೆ. ಮನುಷ್ಯನು ತನ್ನ ಶುಭ ಅಥವಾ ಅಶುಭ ಕರ್ಮಗಳ ಫಲವಾಗಿ ಸುಖ ಅಥವಾ ದುಃಖವನ್ನು ಅನುಭವಿಸುತ್ತಾನೆ. ಭಾರತದಲ್ಲೂ ಜಡವಾದಿ ಚಾರ್ವಾಕರು ಇದ್ದರು. ಅವರು ಜೀವನದ ದುಃಖಗಳನ್ನು ಉಪೇಕ್ಷಿಸಿ ಸುಖವನ್ನೇ ಅನುಭವಿಸಬಯಸುತ್ತಿದ್ದರು. ಮೀಮಾಂಸಕರ ಮತದಂತೆ, ಈ ಜನ್ಮದಲ್ಲಿ ಸತ್ಕರ್ಮವನ್ನು ಮಾಡಿದರೆ ಮುಂದೆ ಸ್ವರ್ಗಸುಖ ಸಿಗುತ್ತದೆ. ಪತಂಜಲಿ ಯೋಗಸೂತ್ರದ ಪ್ರಕಾರ ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಮತ್ತು ಅಭಿನಿವೇಶ ಎಂಬ ಐದು ಕ್ಲೇಶಗಳೇ ದುಃಖಕ್ಕೆ ಕಾರಣ.

ಯೋಗಿಗಳ ಪ್ರಕಾರ ದುಃಖ ಮೂರು ಬಗೆಯದಾಗಿರುತ್ತದೆ. ಗತ (ಭೂತಕಾಲದ) ದುಃಖ, ಆಗತ (ವರ್ತಮಾನದ) ದುಃಖ ಮತ್ತು ಅನಾಗತ, ಆಗಾಮಿ (ಭವಿಷ್ಯತ್) ದುಃಖ. ಜನ ಈ ಮೂರು ದುಃಖಗಳಿಂದಲೂ ಒದ್ದಾಡುತ್ತಾರೆ. ಆದರೆ ಯೋಗಿಗಳು ಹೇಳುತ್ತಾರೆ, ವರ್ತಮಾನದ ದುಃಖವನ್ನಂತೂ ಅನುಭವಿಸಲೇಬೇಕು. ಆದರೆ ಅನಾಗತ ಅಥವಾ ಆಗಾಮಿ ದುಃಖವನ್ನು ನಾಶ ಮಾಡಬಹುದು. ಹೇಗೆ? **'ಹೇಯಂ ದುಃಖಂ ಅನಾಗತಮ್'** — ಅದನ್ನು ದೂರ ಮಾಡುವ ಉಪಾಯ ಅಷ್ಟಾಂಗಯೋಗ.

ಗೀತೆಯಲ್ಲಿ ದುಃಖದ ಸಮಸ್ಯೆಯನ್ನು ವಿಶದವಾಗಿ ವಿವೇಚಿಸಲಾಗಿದೆ. ಶ್ರೀಕೃಷ್ಣ ಸುಖದುಃಖದಲ್ಲಿ ಸಮಬುದ್ಧಿಯನ್ನು ಅಭ್ಯಸಿಸುವಂತೆ ಆದೇಶಿಸುತ್ತಾನೆ. ಸಮತ್ವವನ್ನು ಸಾಧಿಸಲು ಅವನು ಅರುಹಿದ ಉಪಾಯಗಳು — ಅಹಂಕಾರ ತ್ಯಾಗ, ಕರ್ತೃತ್ವ ಭೋಕ್ತೃತ್ವದ ತ್ಯಾಗ. ಕರ್ಮ ಮಾಡು, ಆದರೆ ಫಲಾಪೇಕ್ಷೆಯನ್ನು ಬಿಡು, ಅನಾಸಕ್ತಿಯನ್ನು ಕಲಿತುಕೋ ಇತ್ಯಾದಿ. ಗೀತೆಯಲ್ಲಿ ದುಃಖವನ್ನು ಸುಖಕ್ಕಿಂತ ಬೇರೆಯಾಗಿ ನೋಡಲಾಗಿಲ್ಲ. ಕೇವಲ ದುಃಖದಿಂದ ಪಾರಾಗುವುದಲ್ಲ, ಸುಖ-ದುಃಖವೆರಡನ್ನೂ ಮೀರಿ ಬೆಳೆಯುವ ಕರೆಯನ್ನು ಶ್ರೀಕೃಷ್ಣನು ನೀಡಿದ್ದಾನೆ.

ಭಕ್ತಿಶಾಸ್ತ್ರಗಳಲ್ಲಿ ಇದೇ ವಿಚಾರವನ್ನು ಇನ್ನೊಂದು ದೃಷ್ಟಿಯಿಂದ ಹೇಳಲಾಗಿದೆ. ಭಕ್ತ ತನ್ನ ಸುಖದುಃಖವೆರಡನ್ನೂ ಭಗವಂತನ ಇಚ್ಛೆ ಎಂದು ಬಗೆಯುತ್ತಾನೆ. ಆದ್ದರಿಂದ ಅವನು ಎರಡನ್ನೂ ಭಗವಂತನ ಕೃಪೆ ಎಂದು ಸಂತೋಷದಿಂದ ಸ್ವೀಕರಿಸುತ್ತಾನೆ. ಮಗುವಿಗೆ ಹಾಲುಣಿಸುವ ತಾಯಿ ಎರಡು ಏಟನ್ನೂ ಕೊಡುತ್ತಾಳೆ. ಆದ್ದರಿಂದ ಭಕ್ತನು ಯಾವುದೇ ವಸ್ತು , ವ್ಯಕ್ತಿ , ಘಟನೆಯನ್ನು ನೋಡುವುದಿಲ್ಲ. ಬದಲಾಗಿ ಎಲ್ಲದರಲ್ಲಿ ತನ್ನ ಪ್ರಿಯತಮ ಪ್ರಭುವನ್ನು ಕಾಣುತ್ತಾನೆ. ಆ ಮಹಾಪ್ರೇಮವು ದುಃಖವನ್ನು ಸಹಿಸುವ ಅದ್ಭುತ ಶಕ್ತಿಯನ್ನು ನೀಡುತ್ತದೆ. ಒಬ್ಬ ತಾಯಿ ಮಗುವಿಗಾಗಿ ಎಷ್ಟೊಂದು ದುಃಖ-ಕಷ್ಟಗಳನ್ನು ಸಹಿಸುತ್ತಾಳೆ. ಅವು ಅವಳಿಗೆ ಕಷ್ಟವೆನ್ನಿಸುವುದೂ ಇಲ್ಲ. ಅದೇ ರೀತಿ ಭಕ್ತನಿಗೂ ತನ್ನ ಪ್ರಿಯತಮನಿಗಾಗಿ ಕಷ್ಟಗಳನ್ನು ಸಹಿಸುವಲ್ಲಿ ಆನಂದವಿದೆ.

ಉಪನಿಷತ್ತಿನಲ್ಲೂ ದುಃಖದ ಸಮಸ್ಯೆಯನ್ನು ಹಲವು ಕಡೆ ವಿಶ್ಲೇಷಿಸಲಾಗಿದೆ. ಛಾಂದೋಗ್ಯ ಉಪನಿಷತ್ತಿನಲ್ಲಿ ನಾರದರು ಸನತ್ಕುಮಾರರನ್ನು ಸಮೀಪಿಸಿ ದುಃಖನಿವೃತ್ತಿಯ ಉಪಾಯವನ್ನು

ಕೇಳುತ್ತಾನೆ. ಮೈತ್ರೇಯಿಯೂ ಯಾಜ್ಞವಲ್ಕ್ಯರು ಸಂನ್ಯಾಸಕ್ಕೆ ಹೊರಡಲಿದ್ದಾಗ ತತ್ತ್ವವಿಚಾರವಾಗಿ ಜಿಜ್ಞಾಸೆಯನ್ನು ಮಾಡುತ್ತಾಳೆ. ಉಪನಿಷತ್ತು ಸುಸ್ಪಷ್ಟವಾಗಿ ಘೋಷಿಸುತ್ತದೆ: '**ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ದ್ವಿತೀಯಾದ್ವೈ ಭಯಂ ಭವತಿ**' — ಭೂಮದಲ್ಲಿ ಸುಖವಿದೆ, ಅಲ್ಪದಲ್ಲಿ ಸುಖವಿಲ್ಲ, ದ್ವೈತದಲ್ಲಿ, ಎರಡು ಇರುವಲ್ಲಿ — ದುಃಖವಿದೆ. ಹೀಗೆ ಉಪನಿಷತ್ತಿನಲ್ಲಿ ಏಕತ್ವದರ್ಶನ ಮತ್ತು ಅದ್ವೈತಭಾವದಲ್ಲಿ ಸಂಸ್ಥಿತರಾಗುವುದೇ ದುಃಖನಿವೃತ್ತಿಯ ಉಪಾಯ ಎಂದು ಹೇಳಲಾಗಿದೆ.

**ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥**

*ಈಶಾವಾಸ್ಯ, ೭.*

**ನಿತ್ಯೋಽನಿತ್ಯಾನಾಂ ಚೇತನಶ್ಚೇತನಾನಾಂ**
**ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ ।**
**ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ**
**ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್ ॥**

*ಕಠೋಪನಿಷತ್, ೫.೧೩*

'ಜ್ಞಾನನೇತ್ರದಿಂದ ಆತ್ಮವನ್ನು ಎಲ್ಲಡೆ ದರ್ಶಿಸುವವನಿಗೆ ಶೋಕ, ಮೋಹ ಇರುವುದಿಲ್ಲ. ನಾಶವಾಗುವ ಅನಿತ್ಯ ವಸ್ತುಗಳ ನಡುವೆ ಅವಿನಾಶಿ ಆತ್ಮವನ್ನು ದರ್ಶಿಸುವವನು ಶಾಶ್ವತ ಸುಖ-ಶಾಂತಿಯನ್ನು ಪಡೆಯುತ್ತಾನೆ, ಇತರರಲ್ಲ.' ಎಲ್ಲ ಶಾಸ್ತ್ರಗಳೂ ಸುಖಿಗಳಾಗಲು ವಾಸನಾ ತ್ಯಾಗ, ಕಾಮನೆಗಳ ತ್ಯಾಗ ಮತ್ತು ಆಸಕ್ತಿಯ ತ್ಯಾಗವನ್ನು ಹೇಳಿವೆ.

**ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥**

*(ಗೀತೆ, ೨.೭೧)*

ತನ್ನ ಸ್ವರೂಪದಲ್ಲಿ ನೆಲೆಸಿದ ತ್ರಿಗುಣಾತೀತ ಜ್ಞಾನಿಯು ಸುಖ-ದುಃಖವೆರಡನ್ನೂ ಸಾಕ್ಷಿಯಾಗಿ ಕಾಣಬಲ್ಲನು. ಗಂಗೆಯಲ್ಲಿ ಹೂವಿನ ಹಾರವೂ ತೇಲುತ್ತದೆ, ಶವವೂ ತೇಲುತ್ತದೆ. ನಾವು ದಡದ ಮೇಲೆ ನಿಂತು ಎರಡನ್ನೂ ನಿಷ್ಪಕ್ಷಪಾತವಾಗಿ ನೋಡುತ್ತೇವೆ. ಅಂತೆಯೇ ಜ್ಞಾನಿಯೂ ಶರೀರವನ್ನು ತನ್ನಿಂದ ಪ್ರತ್ಯೇಕವಾಗಿ ನೋಡುತ್ತಾನೆ. ಶರೀರದ ಸುಖ-ದುಃಖಗಳನ್ನು ತನ್ನಿಂದ ಬೇರೆಯಾಗಿ ನೋಡು ತ್ತಾನೆ. ನೋವಿಗೆ, ದುಃಖಕ್ಕೆ ಕಾರಣಗಳು ಸಾವಿರ. ಮೂರ್ಖ ಮಾತ್ರ ಅವುಗಳಲ್ಲಿ ಸಿಕ್ಕಿಬಿದ್ದು ಒದ್ದಾಡುತ್ತಾನೆ, ಜ್ಞಾನಿಯಲ್ಲ.

**ಶೋಕಸ್ಥಾನಸಹಸ್ರಾಣಿ ಭಯಸ್ಥಾನಶತಾನಿ ಚ ।**
**ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಮ್ ॥**

*(ಮಹಾಭಾರತ, ಅರಣ್ಯ ಪರ್ವ, ೨.೧೬)*

ಜೈನ ಧರ್ಮದ ಪ್ರಕಾರ ಮನುಷ್ಯನ ಸುಖ-ದುಃಖಕ್ಕೆ ಅವನ ಶುಭ ಅಥವಾ ಅಶುಭ ಕರ್ಮಗಳು ಕಾರಣ. ಪೂರ್ವಕೃತ ದುಷ್ಕರ್ಮಗಳಿಂದಲೇ ಎಂದರೆ ಪಾಪದಿಂದಲೇ ನಮಗೆ ದುಃಖ ಬರುವುದು. ಆದ್ದರಿಂದ ದುಃಖದಿಂದ ಪಾರಾಗಲು ಉಪಾಯ ಹೊಸ ದುಷ್ಕರ್ಮಗಳನ್ನು ಮಾಡದಿರುವಿಕೆ ಮತ್ತು ಪೂರ್ವ ಕರ್ಮಫಲಗಳಿಂದ ಪಾರಾಗಲು ತಪಸ್ಸನ್ನು ಮಾಡುವುದು. ಕರ್ಮ ಸಂಚಯವನ್ನು ನಿಲ್ಲಿಸಬೇಕು. ಅದನ್ನು ಸಂವರ ಎಂದು ಕರೆಯಲಾಗಿದೆ. ತಪಸ್ಸಿನಿಂದ ಅಶುಭ ಕರ್ಮಗಳನ್ನು ನಾಶ ಮಾಡುವುದನ್ನು ನಿರ್ಜರಾ ಎಂದು ಕರೆಯಲಾಗಿದೆ.

ತಪಸ್ಸು ಎಂದರೆ ಸ್ವಇಚ್ಛೆಯಿಂದ ಕಷ್ಟವನ್ನು ಸಹಿಸುವುದು. ಮನಸ್ಸಿಲ್ಲದೆ ಕಷ್ಟಗಳನ್ನು ಸಹಿಸುವುದು ದುಃಖವನ್ನುಂಟುಮಾಡುತ್ತದೆ. ಆದರೆ ನಾವು ಸ್ವೇಚ್ಛೆಯಿಂದ ಕಷ್ಟಗಳನ್ನು ಸಹಿಸಿದಾಗ ಅದು ಮುಕ್ತಿಗೆ ಕಾರಣವಾಗುತ್ತದೆ. ನಮ್ಮ ಸುಖ-ದುಃಖಗಳಿಗೆ ಬೇರೆ ಯಾರೂ ಕಾರಣರಲ್ಲ. ಅದಕ್ಕೆ ನಾವುಗಳೇ ಜವಾಬ್ದಾರರು.

**ಸುಖಸ್ಯ ದುಃಖಸ್ಯ ನ ಕೋಽಪಿ ದಾತಾ**
**ಪರೋ ದದಾತೀತಿ ಕುಬುದ್ಧಿರೇಷಾ ।**
**ಅಹಂ ಕರೋಮೀತಿ ವೃಥಾಭಿಮಾನಃ**
**ಸ್ವಕರ್ಮಸೂತ್ರಗ್ರಥಿತೋ ಹಿ ಲೋಕಃ ॥**

*ಅಧ್ಯಾತ್ಮ ರಾಮಾಯಣ, ಅಯೋಧ್ಯಾಕಾಂಡ, ೬.೬*

## ಮಹಾಪುರುಷರು ತೋರಿದ ಆದರ್ಶ

ಮಹಾಪುರುಷರು ಅದರಲ್ಲೂ ಅವತಾರಗಳು ತಮ್ಮ ಜೀವನದಲ್ಲಿ ಜನಸಾಮಾನ್ಯರಿಗೆ ದುಃಖಗಳನ್ನೆದುರಿಸುವ ಬಗೆಯನ್ನು ತೋರಿಸಿಕೊಡಲು ಅನೇಕ ಕಷ್ಟದುಃಖಗಳನ್ನು ಸಹಿಸಿದ್ದಾರೆ. ಅಷ್ಟೇ ಅಲ್ಲ, ಅವತಾರಗಳು ನಮ್ಮ ಪಾಲಿನ ಕಷ್ಟಗಳನ್ನು ತಾವು ಸಹಿಸಿ, ನಮ್ಮ ಭಾರವನ್ನು ಕಡಿಮೆ ಮಾಡುತ್ತಾರೆ. ದುರ್ಬಲ ಮಾನವರ ಕಷ್ಟದುಃಖಗಳನ್ನು ತಾವೇ ಅನುಭವಿಸುವಲ್ಲಿ ಅವರಿಗೆ ಅಸಾಧಾರಣ ಸಾಮರ್ಥ್ಯವಿದೆ. ಏಸುಕ್ರಿಸ್ತನ ಉದಾಹರಣೆಯನ್ನು ನಾವು ಅದಾಗಲೇ ನೋಡಿದ್ದೇವೆ. ಕ್ರಿಸ್ತನು ಸಹಿಸಿದ ಆ ದುಃಖಗಳು ಮಾನವತೆಗೆ ಕಷ್ಟಸಹಿಷ್ಣುತೆಯ ಆದರ್ಶವನ್ನು ತೋರಿಸಲೆಂದಷ್ಟೇ ಅಲ್ಲ, ಆ ಮೂಲಕ ಅವನು ಮಾನವತೆಯ ಕಷ್ಟಗಳನ್ನು ತಾನು ಅನುಭವಿಸಿ ಅವರ ಪಾಪಭಾರವನ್ನು ಕಡಿಮೆ ಮಾಡಿರುವನು. ಬುದ್ಧ ಕಠೋರ ತಪಸ್ಸಿನಿಂದ ನಿರ್ವಾಣ ಪದವನ್ನು ಪಡೆದು ಜಗತ್ತಿಗೆ ದುಃಖನಿವೃತ್ತಿಯ ಸರ್ವಜನಸುಲಭ ಉಪಾಯವನ್ನು ತೋರಿಸಿಕೊಟ್ಟನು.

ಶ್ರೀರಾಮನ ಜೀವನವು ದುಃಖ ಮತ್ತು ವಿಷಮ ಸಾಮಾಜಿಕ ಸಮಸ್ಯೆಗಳಿಗೆ ಉತ್ತರವನ್ನು ನೀಡುವ ಒಂದು ಸುಂದರ ಚರಿತ್ರೆಯಾಗಿದೆ. ಮಾನವನ ಮೂರು ಅನಿವಾರ್ಯ ಸಮಸ್ಯೆಗಳು — ಅಸಹಾಯಕತೆ, ಕೊರತೆ ಮತ್ತು ಅನಿಶ್ಚಿತತೆ — ಅಯೋಧ್ಯೆಯ ಇತಿಹಾಸದಲ್ಲೇ ಸ್ಪಷ್ಟವಾಗಿ ಎದುರಾಗಿದ್ದವು. ಮಹಾರಾಜ ದಶರಥನು ಜ್ಯೋತಿಷಿಗಳೊಂದಿಗೆ ಪರ್ಯಾಲೋಚಿಸಿ ಮರುದಿನ ಪ್ರಾತಃಕಾಲ ಶ್ರೀರಾಮನ ಪಟ್ಟಾಭಿಷೇಕವೆಂದು ತೀರ್ಮಾನಿಸಿ

ದ್ದನು. ಆದರೆ ಮರುದಿನ ಬೆಳಗ್ಗೆ ರಾಮ ವನವಾಸಕ್ಕೆ ಹೋಗಬೇಕಾಯಿತು. ಜೀವನದ ಅನಿಶ್ಚಿತತೆಗೆ ಇದಕ್ಕಿಂತ ದೊಡ್ಡ ಉದಾಹರಣೆ ಎಲ್ಲಿ ಸಿಗಲು ಸಾಧ್ಯ? ಕೈಕೇಯಿ ಮುಂದಿಟ್ಟ ಎರಡು ವರಗಳನ್ನು ನೀಡುವಲ್ಲಿ ಮತ್ತು ತನ್ಮೂಲಕ ನಿರ್ಮಾಣಗೊಂಡ ವಿಷಮ ಪರಿಸ್ಥಿತಿಯನ್ನು ನಿಭಾಯಿಸುವಲ್ಲಿ ರಾಜ ದಶರಥನ ಅಸಹಾಯ ಕತೆಯು ಮಾನವ ಜೀವನದ ಅನಿವಾರ್ಯ ಮುಖವೇ ಆಗಿದೆ.

ರಾಮಾಯಣದ ಬೇರೆ ಬೇರೆ ಪಾತ್ರಗಳು ಈ ಸಮಸ್ಯೆಯನ್ನು ಎದುರಿಸಿದ ಬಗೆ ನಮಗೆ ಆದರ್ಶ. ರಾಮನು ಸ್ವಇಚ್ಛೆಯಿಂದ ಕಾಡಿಗೆ ಹೋಗಲು ಒಪ್ಪುತ್ತಾನೆ. ರಾಜಸಿಂಹಾಸನವನ್ನು ತನ್ನ ಪ್ರೀತಿಯ ತಮ್ಮ ಭರತನಿಗೆ ಕೊಡಲು ಅವನಿಗೆ ಪೂರ್ಣ ಸಮ್ಮತಿಯಿದೆ. ಇನ್ನೊಂದೆಡೆ ಭರತನು ರಾಮನ ಪ್ರತಿನಿಧಿಯಾಗಿ ರಾಜ್ಯಭಾರವನ್ನು ಮಾಡುತ್ತಾನೆಯೇ ಹೊರತು ರಾಜ್ಯಪದವಿಯನ್ನು ಸ್ವೀಕರಿಸುವುದಲ್ಲ. ಹೀಗೆ ತ್ಯಾಗ ಮತ್ತು ಪ್ರೇಮದಿಂದಲೇ ಸಮಸ್ಯೆಗೆ ಪರಿಹಾರವನ್ನು ಕಂಡುಕೊಂಡರು. ಸೀತೆ ಮತ್ತು ಲಕ್ಷ್ಮಣರೂ ಅದಕ್ಕೆ ತಕ್ಕಂತೆಯೇ ಇದ್ದರು. ಕೌಸಲ್ಯೆ, ಮತ್ತು ಸುಮಿತ್ರೆಯರು ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಅದಕ್ಕೆ ತಕ್ಕಂತೆ ತ್ಯಾಗಮಾಡುತ್ತಾರೆ. ಪ್ರತಿಯೊಬ್ಬರೂ ತ್ಯಾಗ, ಪ್ರೇಮ ಮತ್ತು ಉನ್ನತ ನೈತಿಕ ಆದರ್ಶದ ನೆರವಿನಿಂದಲೇ ದುಃಖವನ್ನು ಪರಾಭವಗೊಳಿಸಿದರು.

ಸ್ವಾಮಿ ವಿವೇಕಾನಂದರ ಇಡೀ ಜೀವನ ಬಹಳ ಕಷ್ಟಕರವಾಗಿತ್ತು. ದುಃಖನಿವೃತ್ತಿಗೆ ಅವರ ಮಾರ್ಗದರ್ಶನವೇನು? ಅವರು ಹೇಳುತ್ತಾರೆ, ಸುಖ-ದುಃಖ ಎರಡೂ ಸತ್ಯ. ಸುಖವು ದುಃಖದ ಕಿರೀಟವನ್ನು ಧರಿಸಿಕೊಂಡು ಮನುಷ್ಯನ ಬಳಿಬರುತ್ತದೆ. ಅವೆರೆಡರಲ್ಲೂ ಭಗವಂತನನ್ನು ನೋಡಲೆತ್ನಿಸಬೇಕು. '' Learn to recognise mother as instinctively in evils as in good.'' ಒಳಿತಿನಲ್ಲಿ ತಾಯಿಯನ್ನು ನೋಡುವಂತೆ ಕೆಡುಕಿನಲ್ಲೂ ತಾಯಿಯನ್ನು ನೋಡಿ. ಇದಾಗಿ ದುಃಖಗಳು ನಮ್ಮ ಪಾಲಿನ ಶಿಕ್ಷಕರು. ಸುಖಕ್ಕಿಂತ ದುಃಖವೇ ನಮಗೆ ಹೆಚ್ಚಿನ ಪಾಠವನ್ನು ಕಲಿಸುತ್ತದೆ. ಸಂಸಾರವೆಂಬ ಸಿಂಹಸ್ವಪ್ನವನ್ನು ಭೇದಿಸುವಲ್ಲಿ ದುಃಖ ದೊಡ್ಡ ಸಹಾಯವನ್ನು ಮಾಡುತ್ತದೆ. ನಾವು ಇನ್ನೊಬ್ಬರ ದುಃಖವನ್ನು ಅರ್ಥಮಾಡಿಕೊಂಡು ಪರಿಹರಿಸಲೆತ್ನಿಸಬೇಕು. ಅವರು ತಮ್ಮ 'Kali The Mother' ಎಂಬ ಕವನದಲ್ಲಿ ದುಃಖವನ್ನು ಸಪ್ರೇಮದಿಂದ ಸ್ವೀಕರಿಸುವಂತೆ ಕರೆ ನೀಡಿದ್ದಾರೆ.

ಬಡವರ, ದುಃಖಿಗಳ ಸಂತ್ರಸ್ತರ ಸೇವೆಯನ್ನು ಮಾಡಲು ನಾನು ಅನೇಕ ಜನ್ಮಗಳೆತ್ತಿ ಬಂದು, ಅಸಂಖ್ಯ ಕಷ್ಟಗಳನ್ನು ಸಹಿಸುವಂತಾಗಲಿ ಎಂದು ಸ್ವಾಮೀಜಿ ಬಯಸಿದ್ದರು.

ಶ್ರೀರಾಮಕೃಷ್ಣರು ತಮ್ಮ ಪರಮ ಕಷ್ಟ ಸಹಿಷ್ಣು ಜೀವನದಿಂದ ದುಃಖನಿವೃತ್ತಿಯ ಉಪಾಯವನ್ನು ತೋರಿಸಿಕೊಟ್ಟಿದ್ದಾರೆ. ಶ್ರೀರಾಮಕೃಷ್ಣರು ಭಕ್ತರ ಅದರಲ್ಲೂ ಗಿರೀಶಚಂದ್ರ ಘೋಷನ ಪಾಪಗಳನ್ನು ಸ್ವೀಕರಿಸಿದ್ದರಿಂದಲೇ ಅವರಿಗೆ ಗಂಟಲಿನ ಕ್ಯಾನ್ಸರ್ ಬರುವಂತಾಯಿತು, ಎಂಬುದು ಭಕ್ತರ ನಂಬಿಕೆ. ಈ ಅಂತಿಮ ಕಾಯಿಲೆ, ಅತ್ಯಂತ ಕಷ್ಟಕರ ಕಾಯಿಲೆಯ ನಡುವೆಯೂ ಅವರು ಸದಾ ಆನಂದಮೂರ್ತಿಯಾಗಿದ್ದರು. ಸ್ವಾಮಿ ತುರೀಯಾನಂದರಂತಹ ಕೆಲವು ಭಕ್ತರಿಗೆ ಶ್ರೀರಾಮಕೃಷ್ಣರು ಕ್ಯಾನ್ಸರಿನ ನೋವಿನಿಂದ ಪೂರ್ಣವಾಗಿ ಬೇರೆಯಾಗಿದ್ದಾರೆ, ಅವರು ಸದಾ ತಮ್ಮ ಆನಂದಮಯ ಸ್ವರೂಪದಲ್ಲಿ ಪ್ರತಿಷ್ಠಿತರಾಗಿದ್ದಾರೆ ಎಂದು ಸ್ಪಷ್ಟವಾಗಿ ಗೊತ್ತಿತ್ತು. ಶ್ರೀರಾಮಕೃಷ್ಣರೂ ಅದನ್ನು ಒಪ್ಪಿದ್ದರು.

ಒಂದು ಸಲ ಒಬ್ಬ ಗಾಯಕ ಶ್ರೀರಾಮಕೃಷ್ಣರೆದುರು, 'ಈ ಜಗತ್ತು ಮಾಯೆಯ ಮನೆ' ಎಂದು ಹಾಡುತ್ತಿದ್ದನು. ಶ್ರೀರಾಮಕೃಷ್ಣರು ಅವನನ್ನು ತಡೆದು ''ಈ ಜಗತ್ತು ಮೋಜಿನ ಮನೆ. ಇದರೊಳು ನಾ ತಿನ್ನುವೆ, ಕುಡಿಯುವೆ, ಕುಣಿಯುವೆ, ಹಾಡುವೆ'' ಎಂಬ ಹಾಡನ್ನು ಹಾಡಿದರು. ಭಗವಂತನನ್ನು ಹಿಡಿದುಕೊಂಡರೆ ಈ ದುಃಖಮಯ ಸಂಸಾರ ಆನಂದಪೂರ್ಣವಾಗುತ್ತದೆ ಎಂದು ಅವರು ಹೇಳುತ್ತಿದ್ದರು. ಅವರು ತಮ್ಮ ಅಣ್ಣನ ಮಗ ಅಕ್ಷಯ ತೀರಿಕೊಂಡಾಗ ಬಹಳ ದುಃಖಿಸಿದರು. ಆದ್ದರಿಂದ ಪುತ್ರಮರಣದ ವೇದನೆಯನ್ನು ಬಲ್ಲವರಾಗಿದ್ದರು. ಅಂತಹವರಿಗೆಲ್ಲ ಸಾಂತ್ವನ ನೀಡಬಲ್ಲವರಾಗಿದ್ದರು.

**ಉಪಸಂಹಾರ:** ದುಃಖಗಳು, ಕಷ್ಟಗಳು ಮಾನವ ಜೀವನದ ಅನಿವಾರ್ಯ ಅಂಗಗಳು. ಅವುಗಳಿಂದ ಯಾರೂ ತಪ್ಪಿಸಿಕೊಳ್ಳಲಾಗದು. ಕೆಲವರಿಗೆ ಶಾರೀರಿಕ ಕಷ್ಟಗಳು ಹೆಚ್ಚು ಇರಬಹುದು. ಕೆಲವರಿಗೆ ಮಾನಸಿಕ ಕಷ್ಟಗಳು. ಮಾನವ ಸಮಾಜ ರಚನೆಯಲ್ಲೇ ಅಭಾವ, ಸ್ಪರ್ಧೆ, ಹೋರಾಟ ಸೇರಿಕೊಂಡಿವೆ. ಹೀಗಿರುವಾಗ ಮಹಾಪುರುಷರು ಮತ್ತು ಋಷಿಮುನಿಗಳು ಸಾರಿದ ವಿಭಿನ್ನ ಉಪಾಯಗಳ ನೆರವಿನಿಂದ ದುಃಖಮುಕ್ತರಾಗಲು ಪ್ರಯತ್ನಿಸಬೇಕು. ಶಾರೀರಿಕ ದುಃಖಗಳನ್ನು ತುಟಿಪಿಟಕ್ಕೆನ್ನದೆ ಧೈರ್ಯದಿಂದ ಸಹಿಸಬೇಕು. ಭಗವಂತನೇ ಆದೇಶಿಸಿದ್ದಾನೆ: *(ಗೀತೆ, ೨.೧೪)*

**ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಽಪಾಯಿನೋಽನಿತ್ಯಾಃ ತಾನ್ ತಿತಿಕ್ಷಸ್ವ ಭಾರತ ॥**

ಈ ಸುಖ ದುಃಖಗಳು ಶಾಶ್ವತವಲ್ಲ. ಅವು ಬರುತ್ತವೆ, ಹೋಗುತ್ತವೆ. ಇನ್ನೊಂದು ಮುಖ್ಯ ವಿಚಾರ ಸಹಿಸುತ್ತ ಸಹಿಸುತ್ತ ಸಹನಶಕ್ತಿ ವೃದ್ಧಿಸುತ್ತದೆ, ದುಃಖಗಳು ಕ್ರಮೇಣ ಕ್ಷೀಣಿಸುತ್ತವೆ.

ದುಃಖಗಳಿಂದ ಪಾರಾಗಲು ಇನ್ನೊಂದು ಮುಖ್ಯ ಉಪಾಯ ದುಃಖದ ಕಾರಣಗಳನ್ನು ನಿವಾರಿಸಿಕೊಳ್ಳಬೇಕು. ದುಃಖಗಳ ಮೂಲ ಕಾರಣ ನಮ್ಮ ಆಸೆ-ಆಕಾಂಕ್ಷೆಗಳು, ಅತೃಪ್ತ ವಾಸನೆಗಳು, ಆಸಕ್ತಿಗಳು ಎಂಬ ವಿಷಯದಲ್ಲಿ ಎಲ್ಲರ ಸಹಮತಿಯಿದೆ. ಆದ್ದರಿಂದ ಅವನ್ನು ಬಿಡಬೇಕು. ಗೀತೆ ಹೇಳುವಂತೆ, ತಮೋಗುಣದ ಫಲ ಅಜ್ಞಾನ, ರಜೋಗುಣದ ಫಲ ದುಃಖ, ಸತ್ವಗುಣದ ಫಲ ಸುಖ.

**ಕರ್ಮಣ ಸುಕೃತಸ್ಯಾಹುಃ ಸಾತ್ವಿಕಂ ನಿರ್ಮಲಂ ಫಲಂ ।**
**ರಜಸಸ್ತು ಫಲಂ ದುಃಖ ಅಜ್ಞಾನಂ ತಮಸಃ ಫಲಂ ॥**

*(ಗೀತೆ, ೧೪.೧೬)*

ಸತ್ವಗುಣ ಮತ್ತು ಚಿತ್ತಶುದ್ಧಿಯಿಂದ ವ್ಯಕ್ತಿ ದುಃಖದಿಂದ ಪಾರಾಗಬಹುದು. ಅದನ್ನು ನಿಷ್ಕಾಮ ಕರ್ಮಯೋಗ, ಪತಂಜಲಿ ಹೇಳಿದ ಅಷ್ಟಾಂಗಯೋಗ ಮಾರ್ಗ, ಭಕ್ತಿಯೋಗ, ಅಥವಾ ಇನ್ನಾವುದೇ ಉಪಾಯದಿಂದ ಸಾಧಿಸಬಹುದು. ಕೊನೆಗೂ ಪೂರ್ಣ ದುಃಖನಿವೃತ್ತಿಯು ಅದ್ವೈತಜ್ಞಾನದಿಂದ ಮಾತ್ರ. ಜ್ಞಾನವೊಂದೇ ಎಲ್ಲ ಕಲ್ಮಶಗಳನ್ನು ಮತ್ತು ಅದರಿಂದ ಹುಟ್ಟುವ ದುಃಖಗಳನ್ನು ಪೂರ್ಣವಾಗಿ ಸುಟ್ಟುಹಾಕುತ್ತದೆ.

ಸಮಾಜದಲ್ಲಿ ಕಾಣುವ ವಿಷಮತೆ, ಅಸಮಾನತೆ, ಶೋಷಣೆ ಇತ್ಯಾದಿ ಮತ್ತು ಅವುಗಳಿಂದ ಹುಟ್ಟುವಂತಹ ಯಾವ ಯಾವ ಸಮಸ್ಯೆಗಳಿವೆಯೋ, ಅವನ್ನು ವ್ಯವಹಾರಜ್ಞಾನದಿಂದ ದೂರ ಮಾಡುವ ಎಲ್ಲ ಪ್ರಯತ್ನಗಳನ್ನು ಮಾಡಬೇಕು. ವ್ಯಕ್ತಿ ತನ್ನ ದುಃಖಗಳನ್ನು ದೊಡ್ಡದಾಗಿಸಿಕೊಳ್ಳದೆ ಇನ್ನೊಬ್ಬರ ದುಃಖಗಳನ್ನು ನಿವಾರಿಸಲು ಪ್ರಯತ್ನಿಸಬೇಕು. ನಮ್ಮ ದುಃಖಗಳಿಗೆ ಒಂದು ಮುಖ್ಯ ಕಾರಣ ನಾವು ನಮ್ಮ ದುಃಖಗಳಿಗೆ ಬಹಳ ಪ್ರಾಮುಖ್ಯತೆ ಕೊಡುತ್ತೇವೆ. ಇನ್ನೊಬ್ಬರ ದುಃಖಗಳನ್ನು ನಾವು ಅಲ್ಪವಾಗಿ ಭಾವಿಸುತ್ತೇವೆ. ಆದರೆ ನಿಜವಾಗಿ ಆಲೋಚಿಸಿದರೆ ಜಗತ್ತಿನಲ್ಲಿ ನಮಗಿಂತ ಹೆಚ್ಚು ದುಃಖಿಗಳು ಬಹಳ ಜನ ಇದ್ದಾರೆ. ಆದ್ದರಿಂದ ತನ್ನ ದುಃಖಗಳಿಗಾಗಿ ಶೋಕಿಸುವ ಬದಲು ಇತರರ ದುಃಖಗಳನ್ನು ಪರಿಹರಿಸಲೆತ್ನಿಸುವುದು ಮನುಷ್ಯ ಕರ್ತವ್ಯ. ಮಹಾಪುರುಷರು ಇದನ್ನು ತಮ್ಮ ಜೀವನದಿಂದ ತೋರಿಸಿಕೊಟ್ಟಿದ್ದಾರೆ. ಈ ಕುರಿತು ಎರಡು ಪ್ರಸಿದ್ಧ ಶ್ಲೋಕಗಳಿವೆ :

**ನ ತ್ವಹಂ ಕಾಮಯೇ ರಾಜ್ಯಂ ನ ಸುಖಂ ನಾಪುನರ್ಭವಮ್ ।**
**ಕಾಮಯೇ ದುಃಖತಪ್ತಾನಾಂ ಪ್ರಾಣಿನಾಮಾರ್ತಿನಾಶನಮ್॥**

'ನಾನು ರಾಜ್ಯವನ್ನು ಬಯಸುವುದಿಲ್ಲ, ಸುಖವನ್ನು ಬಯಸುವುದಿಲ್ಲ. ಮೋಕ್ಷಕಾಮನೆಯೂ ನನಗಿಲ್ಲ. ನಾನು ದುಃಖತಪ್ತ ಜೀವಿಗಳ ಕಷ್ಟಪರಿಹಾರವೊಂದನ್ನೇ ಬಯಸುತ್ತೇನೆ.'

**ಕೋ ನೂನ ಉಪಾಯೋ ಸ್ಯಾದ್ಯೇನಾಹಂ ಸರ್ವದೇಹಿನಾಮ್ ।**
**ಅಂತಃಪ್ರವಿಶ್ಯ ಸತತಂ ಭವೇಯಂ ದುಃಖಭಾರಭಾಕ್ ॥**

ಎಂದರೆ, ಯಾವ ಉಪಾಯದಿಂದ ನಾನು ಎಲ್ಲ ಜೀವರಾಶಿಗಳ ಒಳಹೊಕ್ಕು ಅವರ ದುಃಖದ ಭಾರವನ್ನು ನಾನು ಹೊರುವಂತಾಗುತ್ತದೆ?



## ಸ್ವಾಮಿ ವಿವೇಕಾನಂದರ ಶಿಷ್ಯ

# ಶರತ್‌ಚಂದ್ರ ಚಕ್ರವರ್ತಿ

ಇಂಗ್ಲಿಷ್ ಮೂಲ : **ಛಾಯಾ ಬ್ಯಾನರ್ಜಿ**

ಸಂಗ್ರಹಾನುವಾದ: **ಸ್ವರ್ಣಗೌರಿ**

ದಿವ್ಯತೆಯ ಸ್ಪರ್ಶದಿಂದ ಅತ್ಯಂತ ಸಾಮಾನ್ಯ ವ್ಯಕ್ತಿಯೂ ಅತಿಶ್ರೇಷ್ಠ ಪದವಿಯನ್ನು ಹೊಂದುವನು ಎನ್ನುವ ಮಾತಿಗೆ ಉತ್ತಮ ನಿದರ್ಶನವೇ ಶರತ್‌ಚಂದ್ರ ಚಕ್ರವರ್ತಿ. ಸ್ವಾಮಿ ವಿವೇಕಾನಂದರ ಪದತಲದಲ್ಲಿ ಕುಳಿತು, ಅವರಿಂದ ಕೇಳಿದ ಮಾತುಗಳನ್ನು ದಾಖಲಿಸಿ ಜಗತ್ತಿಗೆ ಮಹದುಪಕಾರ ಮಾಡಿದ ಈ ಶಿಷ್ಯನ ಜೀವನಚರಿತ್ರೆ ಇಲ್ಲಿದೆ. ಆಂಗ್ಲ ಮೂಲ ಗ್ರಂಥ ಚೆನ್ನೈ ರಾಮಕೃಷ್ಣ ಮಠದಿಂದ ಪ್ರಕಟವಾಗಿದೆ. ಅನುವಾದಕರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು.

### ಭಾಗ ೧

**ಸ್ವಾ**ಮಿ ವಿವೇಕಾನಂದರ ಸ್ಫೂರ್ತಿದಾಯಕ, ಚೇತೋಹಾರಿ, ಸಿಂಹಗರ್ಜನೆಯ ವಾಣಿ ನಮಗೆ ನಾಲ್ಕು ರೂಪಗಳಲ್ಲಿ ಹರಿದು ಬಂದಿದೆ. ಉಪನ್ಯಾಸಗಳು, ಪತ್ರಮಾಲೆ, ಬರಹಗಳು ಹಾಗೂ ಶಿಷ್ಯರೊಡನೆ ಸಂವಾದಗಳು. ಅವುಗಳಲ್ಲಿ ಸ್ವಾಮೀಜಿಯವರ ಸಂವಾದಗಳು ಸುಮನೋಹರವಾಗಿವೆ. ಏಕೆಂದರೆ ಅತ್ಯಂತ ಗಹನವಾದ ವಿಚಾರಗಳನ್ನು ಸ್ವಾಮೀಜಿ ಉದ್ವೇಗಕ್ಕೆ ಒಳಗಾಗದೆ ಆರಾಮವಾಗಿ, ಗಂಭೀರವಾಗಿ ಹಾಗೂ ಸರಳವಾಗಿಯೂ ಮಾತನಾಡಿದ್ದಾರೆ.

ಸ್ವಾಮೀಜಿಯವರ ಪದತಲದಲ್ಲಿ ಕುಳಿತು, ಆತ್ಮೀಯವಾಗಿ ಅವರ ಸೇವೆ ಮಾಡುತ್ತಾ ಸಂವಾದಗಳಲ್ಲಿ ತೊಡಗಿಸಿ, ಅವರ ಶ್ರೀಮುಖದಿಂದ ಬಂದ ಆಣಿಮುತ್ತುಗಳನ್ನು ಆಯ್ದು ನಮಗೆ ತಲುಪಿಸಿದ ಅವರ ಅಚ್ಚುಮೆಚ್ಚಿನ ಶಿಷ್ಯ — ಶಾಸ್ತ್ರಪಾರಂಗತ, ಸಂಸ್ಕೃತಪಂಡಿತ, ವೃತ್ತಿಯಲ್ಲಿ ಪೋಸ್ಟ್‌ಮಾಸ್ಟರ್ ಆದ ಶರತ್ ಚಂದ್ರನಿಗೆ ದಿವ್ಯತ್ರಯರ ಉಪದೇಶಗಳಿಂದ ಪ್ರೇರಿತರಾದ ಭಕ್ತರು ಎಷ್ಟು ಚಿರಋಣಿಗಳು ಎಂಬುದನ್ನು ತಿಳಿಸಲು ಪದಗಳೇ ಸಾಲವು. ಇಂತಹ ಅಮೂಲ್ಯವೂ, ದುರ್ಲಭವೂ ಆದ ಸಂಪತ್ತನ್ನು ನಮಗೆ ತಲುಪಿಸಿದ ಆ ಮಹಾನುಭಾವನ ಜೀವನದ ಬಗ್ಗೆ ತಿಳಿಯುವ ಕುತೂಹಲ ಭಕ್ತರಿಗೆ ಮೂಡುವುದು ಸಹಜವೇ. ಆದರೆ ಇಂತಹ ಮಹಾಪುರುಷರ ಒಡನಾಟದಲ್ಲಿ ಕ್ಷುದ್ರ ಅಹಂನ್ನು ನಿಶ್ಶೇಷಗೊಳಿಸುವಲ್ಲಿ ಸಫಲರಾದ ಈ ಶಿಷ್ಯರತ್ನನ ಜೀವನದ ವೈಯಕ್ತಿಕ ವಿಷಯಗಳಿಗಾಗಿ ತಡಕಾಡುತ್ತಿದ್ದಾಗ, ಅವರ ಮೊಮ್ಮಗಳು ಶ್ರೀಮತಿ ಛಾಯಾ ಬ್ಯಾನರ್ಜಿಯವರು ಈ ಕೊರತೆಯನ್ನು ನೀಗಿದರು. ಶ್ರೀರಾಮಕೃಷ್ಣ ಮಹಾಸಂಘದ ಇಂಗ್ಲಿಷ್ ಮಾಸಪತ್ರಿಕೆಯಾದ 'ವೇದಾಂತ ಕೇಸರಿ' ಯಲ್ಲಿ ಕ್ರಿ.ಶ.೧೯೮೮ರ ಆಗಸ್ಟ್‌ರಿಂದ ಅಕ್ಟೋಬರ್‌ವರೆಗೆ ೩ ತಿಂಗಳು ಪ್ರಕಟವಾದ ಧಾರಾವಾಹಿಗಳು ಕಿರುಹೊತ್ತಿಗೆಯ ರೂಪದಲ್ಲಿ ಪ್ರಕಟವಾಯಿತು.

**ಜನನ:** ಈಗಿನ ಬಾಂಗ್ಲಾದೇಶದ ಫರೀದ್‌ಪುರ್ ಜಿಲ್ಲೆಯ ಮದಾರಿಪುರ್ ಎಂಬ ಸಣ್ಣ ಹಳ್ಳಿಯಲ್ಲಿ ದೈವಭಕ್ತಳಾದ ವಿಧುಮುಖಿಯು ಕ್ರಿ.ಶ. ೧೮೬೮ರ ಆಗಸ್ಟ್ ೨೧ನೇ ತಾರೀಖು, ಮಹಾಶಿವರಾತ್ರಿಯಂದು ಪುತ್ರರತ್ನನಿಗೆ ಜನ್ಮ ವಿತ್ತಳು. ಅಷ್ಟೇನೂ ಶ್ರೀಮಂತರಲ್ಲದ, ದೊಡ್ಡ ಅವಿಭಕ್ತ ಕುಟುಂಬದ ಯಜಮಾನನಾದ ತಂದೆ ರಾಮ್‌ಕಮಲ್ ಚಕ್ರವರ್ತಿಗೆ ಪೌರೋಹಿತ್ಯದಿಂದ ಬರುವ ವರಮಾನವೇ ಕುಟುಂಬ ನಿರ್ವಹಣೆಗೆ ಆಧಾರವಾಗಿತ್ತು. ರಾಮ್ ಕಮಲ್‌ನ ಪ್ರಭಾವದಿಂದಾಗಿ ಕುಟುಂಬದ ಸದಸ್ಯರೆಲ್ಲರೂ ವಿದ್ಯಾವಂತರಾಗಿದ್ದರಲ್ಲದೆ ಆಧ್ಯಾತ್ಮಿಕತೆಯಲ್ಲಿ ಒಲವನ್ನೂ ಮೈಗೂಡಿಸಿಕೊಂಡಿದ್ದರು. ತಾಯಿ ವಿಧುಮುಖಿ ನೆರೆಹೊರೆ ಹೆಂಗಸರನ್ನೆಲ್ಲಾ ಕೂಡಿಸಿ ಕೊಂಡು ರಾಮಾಯಣ, ಮಹಾಭಾರತ, ಗೀತಾ, ಚಂಡಿ, ಪುರಾಣಗಳನ್ನು ಓದುತ್ತಿದ್ದಳು. ಮಕ್ಕಳ ಭವಿಷ್ಯ ಜೀವನವನ್ನು ರೂಪಿಸುವಲ್ಲಿ ಕೌಟುಂಬಿಕ ಹಿನ್ನಲೆಯು ಅತ್ಯಂತ ಮಹತ್ವದ ಪಾತ್ರವಹಿಸುತ್ತದೆ.



ಹಿರಿಯ ಮಗ ಶರತ್‌ಚಂದ್ರನು ಬಡಕುಟುಂಬದಲ್ಲಿ ಜನಿಸಿದ ಕಾರಣವೋ ಏನೋ ಇತರರ ಕಷ್ಟಸಂಕಟ, ಬಡತನಗಳು ಆತನನ್ನು ಬಹಳ ಬೇಗ ವಿಚಲಿತಗೊಳಿಸುತ್ತಿತ್ತು. ವಾರ್ಷಿಕ ರಜಾದಿನಗಳಲ್ಲಿ ಮನೆಗೆ ಬಂದ ನೆಂಟರಿಷ್ಟರು ಹೊಸ ಉಡುಗೆತೊಡುಗೆಗಳನ್ನು ಕೊಡಿಸುತ್ತಿದ್ದರು. ಆದರೆ ಮುಂದಿನ ವರ್ಷದ ರಜೆಯಲ್ಲಿ ಬಂದಾಗ ಬಾಲಕನ ಮೈ ಮೇಲೆ ಅದೇ ಹಳೇ ಬಟ್ಟೆಗಳಿರುತ್ತಿದ್ದವು! ಆ ಹೊಸ ಬಟ್ಟೆಗಳು ಆಗಲೇ ಬಡಮಕ್ಕಳ ಕೈಸೇರುತ್ತಿದ್ದವು. ಇಷ್ಟು ಚಿಕ್ಕ ವಯಸ್ಸಿಗೇ ಬಾಲಕನಲ್ಲಿ ತ್ಯಾಗವೆಂಬ ಅತ್ಯಮೂಲ್ಯ ಗುಣವು ಸಹಜವಾಗಿ ವ್ಯಕ್ತವಾಗಿತ್ತು. ಭಾಗವತವೆಂದರೆ ಅಚ್ಚುಮೆಚ್ಚು,

ಎಲ್ಲೆಲ್ಲಿ ಭಾಗವತದ ಕಥಾಕಾಲಕ್ಷೇಪ ನಡೆಯುತ್ತಿತ್ತೋ ಅಲ್ಲೆಲ್ಲಾ ಬಾಲಕನು ತಪ್ಪದೇ ಹಾಜರಿರುತ್ತಿದ್ದ. ಆಧ್ಯಾತ್ಮಿಕತೆಯಲ್ಲಿ ಒಲವಿದ್ದ ಬಾಲಕನು ಎಳೆಯ ವಯಸ್ಸಿನಲ್ಲೇ ವೈರಾಗ್ಯದಿಂದ ಅನೇಕ ಬಾರಿ ಮನೆ ಬಿಟ್ಟು ಓಡಿಹೋಗಿದ್ದನು.

**ವಿದ್ಯಾಭ್ಯಾಸ:** ಸುಶಿಕ್ಷಿತ ಕುಟುಂಬದಲ್ಲಿ ಜನಿಸಿದ ಶರತ್‌ನು ಕ್ರಿ.ಶ. ೧೮೮೨ನೇ ಇಸವಿಯಲ್ಲಿ ಎಂಟ್ರೆನ್ಸ್ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ರೂ. ೧೦/- ವಿದ್ಯಾರ್ಥಿ ವೇತನಕ್ಕೆ ಅರ್ಹನಾದನು. ದೇವಭಾಷೆ ಸಂಸ್ಕೃತದಲ್ಲಿ ಒಲವಿದ್ದ ಅವನ ಕವಿ ಹೃದಯದಿಂದ 'ಕಾವ್ಯ ಕುಸುಮಾಂಜಲಿ' ಎಂಬ ಪ್ರಥಮ ಸಂಸ್ಕೃತ ಕಾವ್ಯವರಳಿ, 'ಶರತ್ ಕವಿ'ಯೆನಿಸಿಕೊಂಡನು. ಅವನ ತೀಕ್ಷ್ಣ ಬುದ್ಧಿ ಎಂತಹವರನ್ನೂ ಬೆರಗಾಗಿಸುತ್ತಿತ್ತು. ಮುಂದೆ ಅವನು ಆ ಪುಟ್ಟ ಹಳ್ಳಿಗೆ ಪ್ರಥಮ ಪದವೀಧರನಾದನು.

ಶರತ್‌ನಿಗೆ ಒಬ್ಬ ತಮ್ಮ ಹಾಗೂ ಮೂವರು ತಂಗಿಯರಿದ್ದರು. ಇಂತಹ ದೊಡ್ಡ ಕುಟುಂಬದ ನಿರ್ವಹಣೆಯಲ್ಲಿ ಕಷ್ಟಪಡುತ್ತಿದ್ದ ತಂದೆಗೆ ಆರ್ಥಿಕವಾಗಿ ಹೆಗಲು ನೀಡಲು ಶರತ್‌ಚಂದ್ರನು ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡಲು ಪ್ರಾರಂಭಿಸಿದನು. ಈ ವರಮಾನದಲ್ಲಿ ಅರ್ಧದಷ್ಟು ತಮ್ಮ ರಮೇಶ್‌ಚಂದ್ರನ ವಿದ್ಯಾಭ್ಯಾಸಕ್ಕೆ ವ್ಯಯವಾಗುತ್ತಿತ್ತು. ಮುಂದೆ ಈ ರಮೇಶ್‌ಚಂದ್ರನು ಆಧ್ಯಾತ್ಮಿಕ ಪಥ ಹಿಡಿದು 'ರಸಿಕ್‌ದಾಸ್ ಬಾಬಾಜಿ' ಎಂಬ ಆಶ್ರಮ ನಾಮದಿಂದ ವೃಂದಾವನದಲ್ಲಿ ಹೆಸರುವಾಸಿಯಾಗಿ ಮಠಾಧಿಪತಿಯಾದನು. ಕಠಿಣ ತಪಶ್ಚರ್ಯೆ ಹಾಗೂ ಪವಿತ್ರ ಜೀವನದಿಂದ ಜನರ ಅಪಾರ ಗೌರವ ವಿಶ್ವಾಸಗಳಿಗೆ ಪಾತ್ರನಾಗಿದ್ದನು.

**ವಿವಾಹ:** ಬಾಲ್ಯದಿಂದಲೇ ಶರತ್‌ಚಂದ್ರನಲ್ಲಿ ವೈರಾಗ್ಯದ ಚಿಹ್ನೆಗಳನ್ನು ಕಂಡ ತಾಯ್ತಂದೆಯರು ಆತಂಕಗೊಂಡು ಮೋಕ್ಷದಾಯಿನಿ ಎಂಬ ಒಂಬತ್ತು ವರ್ಷದ ಕನ್ಯೆಯೊಡನೆ ವಿವಾಹ ಮಾಡಿಬಿಟ್ಟರು. ವಿವಾಹದ ನಂತರ ಉನ್ನತ ವ್ಯಾಸಂಗಕ್ಕೆಂದು ಹೋದ ಶರತ್‌ಚಂದ್ರನ ಆಧ್ಯಾತ್ಮಿಕ ಜೀವನವು ಹೊಸ ತಿರುವನ್ನು ಪಡೆಯಿತು. ಶ್ರೀರಾಮಕೃಷ್ಣರ ಗೃಹೀಭಕ್ತರಲ್ಲೆಲ್ಲಾ ಅಗ್ರಗಣ್ಯನಾದ ನಾಗ ಮಹಾಶಯರ ಪರಿಚಯವಾಗಿ ಅವನ ಆಧ್ಯಾತ್ಮಿಕ ಜೀವನದ ಭಾಗ್ಯದ ಬಾಗಿಲು ತೆರೆಯಿತೆಂದರೆ ತಪ್ಪಾಗದು. ಈ ಪರಿಚಯ ಮುಂದೆ ಆತನನ್ನು ತನ್ನ ದೀಕ್ಷಾಗುರು ಸ್ವಾಮಿ ವಿವೇಕಾನಂದರ ಬಳಿಗೆ ಕರೆದೊಯ್ದಿತು.

ಬಿ.ಎ. ಪರೀಕ್ಷೆಯಲ್ಲಿ ಉತ್ತೀರ್ಣನಾದ ಶರತ್‌ನಿಗೆ ಅಂಚೆ ಕಛೇರಿಯಲ್ಲಿ ಡೆಪ್ಯುಟಿ ಪೋಸ್ಟ್‌ಮಾಸ್ಟರ್ ಹುದ್ದೆ ದೊರಕಿತು. ಸ್ವಾಭಿಮಾನಿಯಾದ ಈತನಿಗೆ ಬ್ರಿಟಿಷರನ್ನು ಮೆಚ್ಚಿಸುವುದು ಅಸಾಧ್ಯವಾದ್ದರಿಂದ ನಿವೃತ್ತಿಯವರೆಗೆ ಒಂದು ಬಡ್ತಿಯೂ ದೊರೆಯಲಿಲ್ಲ.

ಕ್ರಿ.ಶ. ೧೮೮೯ರಲ್ಲಿ ನಾಗಮಹಾಶಯರ ಮೂಲಕ ಶ್ರೀರಾಮಕೃಷ್ಣರ ನೇರಶಿಷ್ಯರ ಪರಿಚಯ ಕ್ರಮೇಣ ಆತನಲ್ಲಿ ಶ್ರದ್ಧಾಭಕ್ತಿಗಳು ವೃದ್ಧಿಸಲು ಸಹಕಾರಿಯಾಯಿತು. ಆಗಾಗ್ಗೆ ಮಠಕ್ಕೆ ಬಂದು ಕಸ ಗುಡಿಸುವುದು, ಪಾತ್ರೆ ತೊಳೆಯುವುದು, ಶ್ರೀರಾಮಕೃಷ್ಣರ ನೈವೇದ್ಯಕ್ಕೆ ಹಾಗೂ ಸಾಧುಗಳಿಗೆ ಅಡಿಗೆ ಮಾಡುವುದು ಇತ್ಯಾದಿ ಸೇವಾಕಾರ್ಯಗಳಲ್ಲಿ ತನ್ನನ್ನು ಆನಂದದಿಂದ ತೊಡಗಿಸಿಕೊಳ್ಳುತ್ತಿದ್ದನು. ಮುಂದೆ ಪ್ರತಿವರ್ಷ ಶ್ರೀರಾಮಕೃಷ್ಣರ ಜಯಂತಿಗೆ ಒಂದು ಸ್ತೋತ್ರ ರಚಿಸಿ ಅದರ ಪ್ರತಿಗಳನ್ನು ಭಕ್ತರಿಗೆಲ್ಲಾ ಹಂಚುತ್ತಿದ್ದನು. ಈ ಸ್ತೋತ್ರಗಳು ಹಾಗೂ ಬಂಗಾಳಿ ಭಜನೆಗಳು **'ಶ್ರೀ ಶ್ರೀ ರಾಮಕೃಷ್ಣಾದ್ಯ ಸ್ತವಮಾಲ'** ಎಂದು ಪುಸ್ತಕರೂಪದಲ್ಲಿ ಪ್ರಕಟವಾಯಿತು.

**ಸ್ವಾಮಿ ವಿವೇಕಾನಂದರ ಭೇಟಿ:** ಕ್ರಿ.ಶ. ೧೮೯೭ರ ಫೆಬ್ರವರಿ ತಿಂಗಳಲ್ಲಿ ಪಾಶ್ಚಾತ್ಯ ದೇಶದಿಂದ ಹಿಂತಿರುಗಿದ ಸ್ವಾಮೀಜಿಯವರ ದರ್ಶನಕ್ಕಾಗಿ ಕಾತರದಿಂದ ಕಾಯುತ್ತಿದ್ದ ಶರತ್‌ಚಂದ್ರನ ಜೀವನದಲ್ಲಿ ಆ ಪುಣ್ಯದಿನ, ಪವಿತ್ರಘಳಿಗೆ ಬಂದಿತು. ಶ್ರೀರಾಮಕೃಷ್ಣರ ಭಕ್ತರಾದ ಬಾಗ್‌ಬಜಾರಿನ ಪ್ರಿಯನಾಥ ಮುಖರ್ಜಿಯ ಮನೆಗೆ ಸ್ವಾಮೀಜಿಯವರು ಆಹ್ವಾನಿತರಾಗಿದ್ದರು. ಅವರನ್ನರಸಿಕೊಂಡು ಪ್ರಿಯನಾಥರ ಮನೆಗೆ ಭೇಟಿಯಿತ್ತ ಶರತ್‌ಚಂದ್ರನು ಪ್ರಥಮ ದರ್ಶನದಲ್ಲೇ ಅವರಿಗೆ ತನ್ನ ಹೃದಯವನ್ನು ಅರ್ಪಿಸಿಬಿಟ್ಟನು.

ಸ್ವಾಮಿ ತುರೀಯಾನಂದರು ಶರತ್‌ಚಂದ್ರನನ್ನು ಸ್ವಾಮಿಗಳ ಹತ್ತಿರಕ್ಕೆ ಕರೆದುಕೊಂಡು ಹೋಗಿ ಪರಿಚಯ ಮಾಡಿಸಿದರು. ಆಮೇಲೆ ಜನರ ಗದ್ದಲದಲ್ಲಿ ಮಾತನಾಡುವುದಕ್ಕೆ ಅನುಕೂಲವಿಲ್ಲವೆಂಬುದನ್ನು ತಿಳಿದು ಸ್ವಾಮೀಜಿ ಅವರಿಬ್ಬರನ್ನೂ ಪಶ್ಚಿಮ ದಿಕ್ಕಿನ ಚಿಕ್ಕ ಕೊಠಡಿಗೆ ಕರೆದೊಯ್ದರು. ಅಲ್ಲಿ ಅವರು 'ವಿವೇಕ ಚೂಡಾಮಣಿ'ಯ ಈ ಶ್ಲೋಕವನ್ನು ಹೇಳತೊಡಗಿದರು:

ಮಾ ಭೈಷ್ಟ ವಿದ್ವಂಸ್ತವ ನಾಸ್ತ್ಯಪಾಯಃ
ಸಂಸಾರ ಸಿಂಧೋಸ್ತರಣೇಽಸ್ತ್ಯು ಪಾಯಃ ।
ಯೇನೈವ ಯಾತಾ ಯತಯೋಽಸ್ಯ ಪಾರಂ
ತಮೇವ ಮಾರ್ಗಂ ತವ ನಿರ್ದಿಶಾಮಿ ॥

'ಎಲೈ ವಿದ್ವಾಂಸನೇ, ಭಯಪಡಬೇಡ, ನಿನಗೆ ಅಪಾಯವಿಲ್ಲ. ಸಂಸಾರ ಸಾಗರವನ್ನು ದಾಟುವುದಕ್ಕೆ ಉಪಾಯವಿದೆ. ಯಾವುದನ್ನು ಅವಲಂಬನ ಮಾಡಿಕೊಂಡು ಶುದ್ಧಸತ್ವರಾದ ಯೋಗಿಗಳು ಸಂಸಾರ ಸಾಗರವನ್ನು ದಾಟಿದರೋ, ಅದೇ ಉತ್ಕೃಷ್ಟವಾದ ಮಾರ್ಗವನ್ನೇ ನಾನು ತೋರಿಸಿಕೊಡುತ್ತೇನೆ.'

ಈ ಮಾತುಗಳನ್ನು ಕೇಳಿದ ಶರತ್, 'ಸ್ವಾಮೀಜಿ ಈ ರೀತಿಯಲ್ಲಿ ಮಂತ್ರದೀಕ್ಷೆ ಗ್ರಹಣಮಾಡಲು ತನಗೆ ಸೂಚಿಸಿದರೇನು?' ಎಂದು ಯೋಚಿಸತೊಡಗಿದ. ಆತನು ತುಂಬ ಆಚಾರಶೀಲನೂ, ವೇದಾಂತ ಮತವಾದಿಯೂ ಆಗಿದ್ದನು. ಗುರುವನ್ನು ಆರಿಸಿಕೊಳ್ಳುವುದರಲ್ಲಿ ಬುದ್ಧಿಯು ಇನ್ನೂ ಸ್ಥಿರವಾಗಿರಲಿಲ್ಲ ; ಮತ್ತು ವರ್ಣಾಶ್ರಮ ಧರ್ಮದಲ್ಲಿ ತುಂಬ ಪಕ್ಷಪಾತವಿತ್ತು.

ಬಹಳ ಕಾಲದಿಂದ ಮಂತ್ರದೀಕ್ಷೆ ಪಡೆಯಲು ಅವನ ಮನಪ್ರಾಣಗಳು ತವಕಿಸುತ್ತಿದ್ದವು. ಎಷ್ಟೋ ಬಾರಿ ದೀಕ್ಷೆಗಾಗಿ ನಾಗ

ಮಹಾಶಯರನ್ನು ಕಾಡಿಬೇಡಿದ್ದನು. ಆದರೆ ನಾಗಮಹಾಶಯರು ಅವನ ಬೇಡಿಕೆಯನ್ನು ಮನ್ನಿಸದೆ, 'ಸಾಕ್ಷಾತ್ ಶಿವನೇ ನಿನಗೆ ಗುರು ವಾಗುತ್ತಾನೆ' ಎಂದು ಭವಿಷ್ಯ ನುಡಿದಿದ್ದರು. ಈ ಆಶೀರ್ವಚನವು ಹೊಸ ಆಶಾಕಿರಣವನ್ನು ಮೂಡಿಸಿತಾದರೂ, ಒಮ್ಮೊಮ್ಮೆ, 'ನಾಗಮಹಾಶಯರಂತಹ ಗುರುಗಳನ್ನು ಪಡೆಯಲು ನಾನು ಅಯೋಗ್ಯನೇನೋ, ಆದ್ದರಿಂದ ಹೀಗೆ ತಳ್ಳಿಹಾಕುತ್ತಿರುವರು' ಎಂದೆನಿಸಿ ಮನಸ್ಸು ಮುದುಡುತ್ತಿತ್ತು. ಹೀಗೆ ಆಶೆ, ನಿರಾಶೆಗಳ ನಡುವೆ ಮನಸ್ಸು ಹೊಯ್ದಾಡುತ್ತಿತ್ತು.

ಕೆಲವು ದಿನಗಳ ನಂತರ ಒಮ್ಮೆ ಮಧ್ಯಾಹ್ನದ ಸುಡುಬಿಸಿಲಿನಲ್ಲಿ ಸ್ವಾಮೀಜಿಯವರ ದರ್ಶನಕ್ಕೆಂದು ಮೌನವಾಗಿ ಅವರ ಬಳಿಸಾರಿ ಕುಳಿತನು. ಒಮ್ಮೆ ಅವರತ್ತ ಕಣ್ಣು ಹಾಯಿಸಿದಾಗ ಸ್ವಾಮೀಜಿಯ ಬದಲು ಸಾಕ್ಷಾತ್ ಶಿವನನ್ನು ದರ್ಶಿಸಿ ವಿಸ್ಮಿತನಾದನು! ಶರತ್ ಕೇವಲ ಪಂಡಿತನಾಗಿರಲಿಲ್ಲ; ತನ್ನ ತೀಕ್ಷ್ಣ ವಿಚಾರಬುದ್ಧಿಗೆ ನಿಲುಕದಿರುವ ಯಾವುದನ್ನೂ ಒಪ್ಪುತ್ತಿರಲಿಲ್ಲ ; ಮತ್ತೆ ಮತ್ತೆ ಕಣ್ಣುಜ್ಜಿ ನೋಡಿದನು, ಕಣ್ಣನ್ನೇ ನಂಬದಾದ! ಕುತೂಹಲ ಹತ್ತಿಕ್ಕಲಾಗದೆ, ನಿರ್ಭಯವಾಗಿ ಸ್ವಾಮೀಜಿಯವರ ಹತ್ತಿರಕ್ಕೆ ಬಂದು ಪರೀಕ್ಷಿಸಿದರೆ ಸಾಕ್ಷಾತ್ ಶಿವನು ಆಳವಾದ ಧ್ಯಾನದಲ್ಲಿ ಇರುವಂತೆ ಕಂಡಿತು. ಇದೇನು ಭ್ರಮೆಯೋ, ಅಲ್ಲವೋ ಎಂದು ಖಚಿತ ಪಡಿಸಿಕೊಳ್ಳಲು ಮತ್ತಷ್ಟು ಹತ್ತಿರ ಸರಿದನು. ತಕ್ಷಣವೇ ನಾಗಮಹಾಶಯರ, 'ಸಾಕ್ಷಾತ್ ಶಿವನೇ ನಿನ್ನ ಗುರುವಾಗುತ್ತಾನೆ' ಎಂಬ ನುಡಿಗಳು ಕಿವಿಯಲ್ಲಿ ಪದೇ ಪದೇ ಮೊಳಗಿದಂತಾಯಿತು. ಕೂಡಲೇ ಸಂಶಯವೆಲ್ಲಾ ನಿವಾರಣೆಯಾಗಿ ಸ್ವಾಮೀಜಿಯವರನ್ನು ಆ ಕ್ಷಣವೇ ಮಾನಸಿಕವಾಗಿ ಗುರುವೆಂದು ಸ್ವೀಕರಿಸಿದನು.

ದಿನ ಕಳೆದಂತೆ ಸ್ವಾಮೀಜಿಯವರತ್ತ ಅವನಿಗೆ ಆಕರ್ಷಣೆ ಹೆಚ್ಚುತ್ತಾ ಹೋಯಿತು. ಸ್ವಾಮೀಜಿ ಸಹ ಅವನನ್ನು ಪ್ರೀತಿಯಿಂದ 'ಬಂಗಾಳ'* ಎಂದು ಸಂಬೋಧಿಸುತ್ತಿದ್ದರು. ಶರತ್‌ಚಂದ್ರನು ತುಂಬಾ ಆಚಾರಶೀಲನಾದವನು; ಆದ್ದರಿಂದ ಅಭಕ್ಷ್ಯವಸ್ತುಗಳನ್ನು ತಿನ್ನುವುದಿರಲಿ, ಯಾರಾದರೂ ಮುಟ್ಟಿದ ಪದಾರ್ಥಗಳನ್ನೂ ತಿನ್ನುತ್ತಿರಲಿಲ್ಲ. ಇದಕ್ಕೋಸ್ಕರ ಸ್ವಾಮಿಗಳು ಆಗಾಗ್ಗೆ ಅವನನ್ನು 'ಭಟ್ಟಾಚಾರ್ಯ ವೈದಿಕ ಬ್ರಾಹ್ಮಣ' ಎಂದು ಕರೆಯುತ್ತಿದ್ದರು. ಒಂದು ದಿನ ಬೆಳಿಗ್ಗೆ ಫಲಾಹಾರದ ಸಮಯದಲ್ಲಿ ವಿಲಾಯಿತಿಯ ಬಿಸ್ಕತ್ತು ಮೊದಲಾದನ್ನು ತಿನ್ನುತ್ತ ಸ್ವಾಮಿಗಳು ಸದಾನಂದ ಸ್ವಾಮಿಗಳಿಗೆ, ''ಭಟ್ಟಾಚಾರ್ಯನನ್ನು ಹಿಡಿದುಕೊಂಡು ಬಾ'' ಎಂದು ಹೇಳಿದರು. ಆ ದಿನ ಶರತ್‌ಚಂದ್ರನು ಮಠದಲ್ಲೇ ಉಳಿದುಕೊಂಡಿದ್ದನು. ಅವರ ಆಜ್ಞೆಯನ್ನು ಕೇಳಿ ಶಿಷ್ಯನು ಹತ್ತಿರ ಬರಲು, ಸ್ವಾಮಿಗಳು ಈ ಪದಾರ್ಥಗಳಲ್ಲಿ ಸ್ವಲ್ಪವನ್ನು ಅವನಿಗೆ ಪ್ರಸಾದದಂತೆ ತಿನ್ನುವುದಕ್ಕೆ ಕೊಟ್ಟರು. ಸಂಕೋಚಪಡದೆ ತಿಂದದ್ದನ್ನು ನೋಡಿ, ''ಇವತ್ತು ಏನು ತಿಂದೆ ಬಲ್ಲೆಯಾ? ಇವು ಕೋಳಿ ಮೊಟ್ಟೆಯಿಂದ ಮಾಡಿದವು!'' ಎಂದರು. ಅದಕ್ಕೆ ಶರತ್‌ಚಂದ್ರ, ''ಏನಾದರೂ ಇರಲಿ, ನಾನು ತಿಳಿದುಕೊಳ್ಳಬೇಕಾದದ್ದಿಲ್ಲ ; ತಮ್ಮ ಪ್ರಸಾದರೂಪವಾದ ಅಮೃತವನ್ನು ತಿಂದು ಅಮರನಾದೆನು'' ಎಂದನು ಆನಂದದಿಂದ. ಆ ವೈದಿಕ ಬ್ರಾಹ್ಮಣ ಭಟ್ಟಾಚಾರ್ಯನೆಲ್ಲಿ? ''ಇಂದಿನಿಂದ ನಿನ್ನ ಜಾತಿ, ವರ್ಗ, ಕುಲ, ಪಾಪ, ಪುಣ್ಯ ಮೊದಲಾದವುಗಳ ಮೇಲಣ ಎಲ್ಲ ಅಭಿಮಾನವೂ ಹೋಗಿಬಿಡಲಿ — ನಾನು ಆಶೀರ್ವಾದ ಮಾಡಿದ್ದೇನೆ'' ಎಂದು ಸ್ವಾಮೀಜಿ ಮನದುಂಬಿ ತಮ್ಮ ಪ್ರೀತಿಯ ಶಿಷ್ಯನನ್ನು ಹರಸಿದರು.

ಇನ್ನೊಮ್ಮೆ ಸ್ವಾಮೀಜಿ ಸೋದರಿ ನಿವೇದಿತಾ, ಸ್ವಾಮಿ ಯೋಗಾನಂದ ಹಾಗೂ ಶರತ್‌ರೊಡಗೂಡಿ ಆಲಿಪುರ್ ಮೃಗಾಲಯಕ್ಕೆ ಭೇಟಿಯಿತ್ತರು. ಅಲ್ಲೆಲ್ಲಾ ಸುತ್ತಾಡಿದ ನಂತರ ಮೃಗಾಲಯದ ಮೇಲ್ವಿಚಾರಕರ ಆಹ್ವಾನದ ಮೇರೆಗೆ ಚಹಾ ಕುಡಿಯಲು ಹೋದರು. ಸ್ವಾಮೀಜಿ, ಸೋದರಿ ನಿವೇದಿತಾ ಸ್ಪರ್ಶಿಸಿದ ಸಿಹಿ ಖಾದ್ಯ ಹಾಗೂ ಕುಡಿಯುವ ನೀರನ್ನು ಶಿಷ್ಯನಿಗೆ ನೀಡಿದರು. ಹಿಂದುಮುಂದು ನೋಡದೆ ಶರತ್ ಮಹಾಪ್ರಸಾದವೆನ್ನುತ್ತಾ ಸಿಹಿ ತಿಂಡಿ ತಿಂದು, ನೀರನ್ನೂ ಕುಡಿದುಬಿಟ್ಟನು. ನಂತರ ರಾತ್ರಿ ಸ್ವಾಮೀಜಿ ಈ ವಿಷಯವನ್ನು ಗಟ್ಟಿಯಾಗಿ ಎಲ್ಲರೆದುರು ಸಾರಿಬಿಟ್ಟರು. ಶರತ್ ನಗುತ್ತಾ, ''ಆದರೆ ಸ್ವಾಮೀಜಿ, ನೀವೇ ನನಗೆ ಆದೇಶಿಸಿದಿರಿ. ಗುರುವಿನ ಆದೇಶವಿದ್ದರೆ ಏನು ಬೇಕಾದರೂ ಮಾಡಬಲ್ಲೆ. ನೀರು ಕುಡಿಯಲು ಮನಸ್ಸು ಸ್ವಲ್ಪ ಹಿಂಜರಿದರೂ, ನೀವು ಕುಡಿದು ಕೊಟ್ಟ ಕಾರಣ ಅದು ಪ್ರಸಾದವಾಯಿತೆಂದು ಎಣಿಸಿ ಸ್ವೀಕರಿಸಿದೆ'' ಎಂದ.

ಸ್ವಾಮೀಜಿ: ಚೆನ್ನಾಯಿತು, ಇನ್ನು ನಿನ್ನ ಜಾತಿ ಕೆಟ್ಟು ಹೋಯಿತು. ನಿನ್ನನ್ನು ಬ್ರಾಹ್ಮಣನೆಂದು ಯಾರೂ ಪರಿಗಣಿಸರು.

ಶಿಷ್ಯ: ಆ ಬಗ್ಗೆ ನಾನು ತಲೆಕೆಡಿಸಿಕೊಳ್ಳುವುದಿಲ್ಲ. ನೀವು ಆದೇಶಿಸಿದರೆ ಶೂದ್ರ ಮನೆಯಲ್ಲೂ ಊಟ ಮಾಡಬಲ್ಲೆ.

ಇದನ್ನು ಕೇಳಿ ಎಲ್ಲರೂ ನಗೆಗಡಲಲ್ಲಿ ಮುಳುಗಿದರು. ನಿಷ್ಠಾವಂತ, ಸಂಪ್ರದಾಯ ಬದ್ಧ ಬ್ರಾಹ್ಮಣಕುಲದಲ್ಲಿ ಜನಿಸಿದ್ದರೂ, ಸ್ವಾಮೀಜಿಯವರ ಮೇಲಿನ ಪ್ರೀತಿಯಿಂದ ಆ ಕಟ್ಟುಪಾಡುಗಳನ್ನೆಲ್ಲಾ ಕಿತ್ತೊಗೆದುದು ಸಾಮಾನ್ಯ ವಿಷಯವಲ್ಲ.

ಸ್ವಾಮೀಜಿಯವರ ಸಿಡಿಲ ನುಡಿಗಳಿಂದ ಆಕರ್ಷಿತರಾದ ಅನೇಕ ಉತ್ಸಾಹೀ ಯುವಕರು ಸಂಸಾರವನ್ನು ತ್ಯಾಗಮಾಡಿ ಸಂನ್ಯಾಸಾಶ್ರಮವನ್ನು ಕೈಗೊಂಡರು. ಬಹುಕಾಲದಿಂದ ಬಂದ ಗುರುಪರಂಪರೆಯನ್ನು ಅನುಸರಿಸಿ ಬ್ರಹ್ಮಸಾಧನಕ್ಕೆ ಉಪಯುಕ್ತವಾದ ಸಂನ್ಯಾಸ ವ್ರತವನ್ನು ತೆಗೆದುಕೊಳ್ಳುವುದಕ್ಕೆ ಮೊದಲು ನಡೆಯಬೇಕಾದ ನೈಷ್ಠಿಕ ಸಂಸ್ಕಾರಗಳನ್ನು ಸ್ವಾಮೀಜಿ ಬ್ರಹ್ಮಚಾರಿಗಳಿಂದ ಯಥಾವತ್ತಾಗಿ ಮಾಡಿಸುತ್ತಿದ್ದರು. ಈ ವೈದಿಕ ಕರ್ಮಗಳಲ್ಲೆಲ್ಲಾ ನಂಬುಗೆಯನ್ನಿಟ್ಟುಕೊಂಡಿದ್ದ ಸ್ವಾಮೀಜಿಯವರಿಗೆ ಈ ಕರ್ಮಗಳೆಲ್ಲಾ ಶಾಸ್ತ್ರೋಕ್ತವಾಗಿ, ಸರಿಯಾಗಿ ನಡೆಯದಿದ್ದರೆ ಅಸಮಾಧಾನವಾಗುತ್ತಿತ್ತು. ಇಂತಹ ಒಂದು ಸಮಯದಲ್ಲಿ ಶರತ್‌ಚಂದ್ರ

* ಅಂದರೆ, ಬಾಂಗ್ಲಾದೇಶದಿಂದ ಬಂದವನು ಎಂದರ್ಥ.

ನಿಗೆ ಶ್ರಾದ್ಧ ಮಾಡಿಸುವ ಕೈಂಕರ್ಯ ದೊರೆತಿದ್ದು ಮಹಾಭಾಗ್ಯವೇ ಸರಿ.

**ದೀಕ್ಷೆ:** ಕ್ರಿ.ಶ. ೧೮೯೭, ಮೇ ತಿಂಗಳು. ಶರತ್‌ಚಂದ್ರನ ಜೀವನದಲ್ಲಿ ಅತ್ಯಂತ ವಿಶೇಷ ದಿನ. ಈ ದಿನ ಸ್ವಾಮೀಜಿ ದೀಕ್ಷೆ ಕೊಡುವುದಾಗಿ ಮಾತು ಕೊಟ್ಟಿದ್ದಾರೆ. ಬೆಳಿಗ್ಗೆ ಹೊತ್ತಿಗೆ ಮುಂಚೆ ಗಂಗೆಯಲ್ಲಿ ಮಿಂದು, ಲಿಚಿ ಹಣ್ಣು ಮತ್ತು ಇತರ ಪದಾರ್ಥಗಳನ್ನು ಕೊಂಡು ಸುಮಾರು ಎಂಟು ಗಂಟೆಯ ಹೊತ್ತಿಗೆ ಆಲಂಬಜಾರಿನ ಮಠಕ್ಕೆ ಬಂದನು. ಅವನನ್ನು ನೋಡಿ ಸ್ವಾಮೀಜಿ ಗೋಪ್ಯವಾಗಿ, ''ಇಂದು ನಿನ್ನನ್ನು 'ಬಲಿ' ಕೊಡಬೇಕು ಅಲ್ಲವೆ?'' ಎಂದು ನಕ್ಕರು. ನಂತರ ಅವನನ್ನು ಪರೀಕ್ಷಿಸಲು ಕೆಲವು ಪ್ರಶ್ನೆಗಳನ್ನು ಹಾಕಲು ಮೊದಲು ಮಾಡಿದರು. ''ನಾನು ನಿನಗೆ ಯಾವಾಗ ಯಾವ ಕೆಲಸವನ್ನು ಮಾಡು ಎಂದು ಹೇಳುತ್ತೇನೋ ಆವಾಗ ಅದನ್ನು ಸಾಧ್ಯವಾದಷ್ಟು ಮಾಡುತ್ತೀಯೊ? ಗಂಗೆಯಲ್ಲಿ ಧುಮುಕಿದರೆ ಅಥವಾ ಮನೆಯ ಛಾವಣಿಯಿಂದ ಕೆಳಕ್ಕೆ ಹಾರಿದರೆ ನಿನಗೆ ಮಂಗಳವಾಗುವುದೆಂದು ತಿಳಿದು ಅದನ್ನೇ ಮಾಡು ಎಂದು ಹೇಳಿದರೆ ಅದನ್ನೂ ಹಿಂದು ಮುಂದು ನೋಡದೆ ಮಾಡಬಲ್ಲೆಯಾ? ಈಗಲೂ ಯೋಚಿಸಿ ನೋಡು. ಇಲ್ಲದಿದ್ದರೆ ಭಾವಾವೇಶಕ್ಕೆ ಒಳಗಾಗಿ ನನ್ನನ್ನು ಗುರುವೆಂದು ಸ್ವೀಕರಿಸಲು ಮುನ್ನುಗ್ಗಬೇಡ.'' ಹೀಗೆ ಕೆಲವು ಪ್ರಶ್ನೆಗಳನ್ನು ಹಾಕಿ ಸ್ವಾಮೀಜಿ ಶಿಷ್ಯನ ಮನಸ್ಸಿನಲ್ಲಿದ್ದ ನಂಬಿಕೆಯ ದಾರ್ಢ್ಯವನ್ನು ತಿಳಿದುಕೊಂಡರು. ಭಟ್ಟಾಚಾರ್ಯನು ತಲೆತಗ್ಗಿಸಿ ''ಮಾಡಬಲ್ಲೆ'' ಎಂದು ಪ್ರತಿಯೊಂದು ಪ್ರಶ್ನೆಗೂ ಉತ್ತರ ಕೊಡುತ್ತಾ ಬಂದನು.

ಹೊತ್ತು ಸುಮಾರು ಒಂಬತ್ತು ಗಂಟೆಯಾಗಿದೆ. ಸ್ವಾಮೀಜಿ ಗಂಗೆಗೆ ಹೋಗದೆ ಮನೆಯಲ್ಲಿಯೇ ಸ್ನಾನ ಮಾಡಿದ್ದಾರೆ. ನಂತರ ಕಾವಿಯ ಮಡಿ ಬಟ್ಟೆಯನ್ನು ಉಟ್ಟುಕೊಂಡು ಮೆಲ್ಲಗೆ ದೇವರ ಮನೆಗೆ ಹೋಗಿ ಪೂಜಾಸನದಲ್ಲಿ ಕುಳಿತುಕೊಂಡರು. ಸ್ವಾಮೀಜಿ ಕರೆದರೆ ಹೋಗೋಣವೆಂದು ದೇವರ ಮನೆಯ ಹೊರಗೆ ಶರತ್ ಕಾದುಕೊಂಡಿದ್ದನು. ಈಗ ಸ್ವಾಮೀಜಿ ಧ್ಯಾನಮಗ್ನನಾದರು; ಮುಕ್ತ ಪದ್ಮಾಸನ; ಕಣ್ಣುಗಳು ಅರ್ಧ ಮುಚ್ಚಿವೆ. ದೇಹ ಮನಸ್ಸು ಪ್ರಾಣ ಇವೆಲ್ಲ ನಿಶ್ಚಲವಾಗಿ ಹೋಗಿರುವಂತಿದೆ. ಧ್ಯಾನ ಮುಗಿಸಿ, 'ಬಾಪ್ಪಾ!' ಎಂದು ಕರೆದರು. ಅವರ ಅಂತಃಕರಣಪೂರ್ವಕವಾದ ಆ ಕರೆಗೆ ಮುಗ್ಧನಾಗಿ ದೇವರ ಮನೆಯೊಳಕ್ಕೆ ಪ್ರವೇಶ ಮಾಡುತ್ತಿದ್ದಂತೆ, ''ಬಾಗಿಲ ಚಿಲಕ ಹಾಕಿಬಿಡು'' ಎಂದರು. ಹಾಗೆ ಮಾಡಿದ ಕೂಡಲೆ, ''ಸ್ಥಿರವಾಗಿ ನನ್ನ ಎಡಭಾಗದಲ್ಲಿ ಕುಳಿತುಕೊ'' ಎಂದರು. ಅವರ ಆಜ್ಞೆ ಯನ್ನು ಶಿರಸಾವಹಿಸಿ ಪಾಲಿಸಿದ ಶರತ್‌ನ ಹೃತ್ಪಿಂಡವು ಒಂದು ವಿಧವಾದ ಅನಿರ್ವಚನೀಯವಾದ ಅಪೂರ್ವ ಭಾವದಲ್ಲಿ ಬಡಿದುಕೊಳ್ಳುತ್ತಿತ್ತಂತೆ.

ಅನಂತರದಲ್ಲಿ ಸ್ವಾಮೀಜಿ ತಮ್ಮ ಕರಕಮಲವನ್ನು ಶಿಷ್ಯನ ತಲೆಯ ಮೇಲಿಟ್ಟು ಕೆಲವು ಗೋಪ್ಯವಾದ ವಿಷಯಗಳನ್ನು ಕೇಳಿದರು; ಸಾಧ್ಯವಾದಷ್ಟು ಮಟ್ಟಿಗೆ ಉತ್ತರಕೊಟ್ಟ ನಂತರ ಮಹಾಬೀಜ ಮಂತ್ರವನ್ನು ಅವನ ಕಿವಿಯಲ್ಲಿ ಮೂರು ಸಾರಿ ಉಚ್ಚರಿಸಿದರು. ಆಮೇಲೆ ಶಿಷ್ಯನಿಂದ ಅವನ್ನು ಮೂರು ಸಾರಿ ಹೇಳಿಸಿದರು. ಅನಂತರ ಸಾಧನದ ವಿಚಾರವಾಗಿ ಸಾಮಾನ್ಯ ಉಪದೇಶವನ್ನು ಕೊಟ್ಟು ಸ್ಥಿರವಾಗಿ ಬಿಡುಗಣ್ಣಿನಿಂದ ಸ್ವಲ್ಪ ಹೊತ್ತು ಶಿಷ್ಯನ ಕಣ್ಣುಗಳನ್ನು ದುರುಗುಟ್ಟಿಕೊಂಡು ನೋಡುತ್ತಿದ್ದರು. ಶರತ್‌ನ ಮನಸ್ಸು ಈಗ ಸ್ತಬ್ಧವಾಗಿ ಏಕಾಗ್ರವಾಗಲು, ಒಂದು ಅನಿರ್ವಚನೀಯವಾದ ಭಾವದಲ್ಲಿ ಸ್ಥಿರವಾಗಿ ಕುಳಿತುಕೊಂಡನು. ಎಷ್ಟು ಹೊತ್ತು ಹೀಗೆ ಕಳೆಯಿತೊ, ಗೊತ್ತೇ ಆಗಲಿಲ್ಲ. ಆಮೇಲೆ ಸ್ವಾಮೀಜಿ, ''ಗುರುದಕ್ಷಿಣೆ ಕೊಡು'' ಎಂದರು. ''ಏನು ಕೊಡಲಿ?'' ಎಂಬ ಪ್ರಶ್ನೆಗೆ ಸ್ವಾಮೀಜಿ, ''ಹೋಗು, ಉಗ್ರಾಣದಿಂದ ಯಾವುದಾದರೂ ಹಣ್ಣನ್ನು ತೆಗೆದುಕೊಂಡು ಬಾ'' ಎಂದು ಆಜ್ಞಾಪಿಸಿದರು. ಶರತ್‌ಚಂದ್ರನು ಓಡಿ ಹೋಗಿ ಹತ್ತು ಹದಿನೈದು ಲಿಚಿ ಹಣ್ಣುಗಳನ್ನು ತೆಗೆದುಕೊಂಡು ಬಂದನು. ಕೈಗೆ ಕೊಡುತ್ತಿದ್ದ ಹಾಗೆ ಸ್ವಾಮೀಜಿ ಅವುಗಳನ್ನೆಲ್ಲಾ ಒಂದೊಂದಾಗಿ ತಿಂದುಬಿಟ್ಟು, ''ನೀನು ಗುರುದಕ್ಷಿಣೆಯನ್ನು ಕೊಟ್ಟು ಆಯಿತು, ನಡೆ!'' ಎಂದರು.

**ತರಬೇತಿ:** ಇವರೀರ್ವರು ಕ್ರಿ.ಶ.೧೮೯೭ ಫೆಬ್ರವರಿಯಲ್ಲಿ ಪ್ರಥಮವಾಗಿ ಭೇಟಿಯಾದರು. ಅಂತಿಮ ಭೇಟಿ ಕ್ರಿ.ಶ. ೧೯೦೨, ೨೮ನೇ ಜೂನ್ ತಿಂಗಳು. ಈ ಐದು ವರ್ಷ ನಾಲ್ಕು ತಿಂಗಳ ಅವಧಿಯಲ್ಲಿ ಶರತ್‌ನು ಅನೇಕ ಬಾರಿ ಸ್ವಾಮಿಗಳನ್ನು ಭೇಟಿಯಾದನು, ಕೆಲವೊಮ್ಮೆ ಪೂರ್ವಬಂಗಾಳದ ಅಡಿಗೆಗಳನ್ನು ಮಾಡಿ ಸ್ವಾಮೀಜಿಯವರನ್ನು ಸಂತುಷ್ಟಗೊಳಿಸಿದ್ದನು. ಪ್ರಖರ ಪಂಡಿತನಾದ ಕಾರಣ ಗುರುವಿನೊಡನೆ ಅನೇಕ ಬಾರಿ ಶಾಸ್ತ್ರಚರ್ಚೆಯನ್ನು ಮಾಡುತ್ತಿದ್ದನು. ಗುರುವನ್ನು ನೆನೆದರೆ ಸಾಕು, ಶರತ್‌ನ ಮನವು ಅಪೂರ್ವ ಆನಂದದಿಂದ ತುಂಬಿಹೋಗುತ್ತಿತ್ತು. ಸ್ವಾಮೀಜಿ ಹಾಗೂ ಶ್ರೀರಾಮಕೃಷ್ಣರ ಇತರ ನೇರ ಶಿಷ್ಯರೆಲ್ಲರ ವಿಶೇಷ ಪ್ರೀತಿಗೆ ಪಾತ್ರನಾದ ಸೌಭಾಗ್ಯಶಾಲಿ ಈತ.

ಕ್ರಿ.ಶ. ೧೮೯೮, ಡಿಸೆಂಬರ್ ೯ನೇ ತಾರೀಖು ಹೊಸಮಠದ ನಿವೇಶನದಲ್ಲಿ (ಈಗಿನ ಬೇಲೂರು ಮಠ) ಸ್ವಾಮೀಜಿ ಪರಮಹಂಸರ ದೇವರ ಪ್ರತಿಷ್ಠೆ ಮಾಡಿದ ಪುಣ್ಯದಿನ. ಶ್ರೀರಾಮಕೃಷ್ಣರ ಭಸ್ಮಾಸ್ಥಿಗಳನ್ನು ಇಟ್ಟಿದ್ದ ತಾಮ್ರಸಂಪುಟವನ್ನು ಸ್ವಾಮೀಜಿ ತಾವೇ ಬಲಭುಜದ ಮೇಲೆ ಇಟ್ಟುಕೊಂಡು ಹೊಸ ನಿವೇಶನಕ್ಕೆ ಹೊರಟರು. ಪ್ರತಿಷ್ಠಾಪನೆಯ ಮಹೋತ್ಸವದ ನಂತರ ಆ ತಾಮ್ರ ಸಂಪುಟವನ್ನು ಸ್ವಾಮೀಜಿ ಭಟ್ಟಾಚಾರ್ಯನಿಗೆ ತಲೆಯ ಮೇಲೆ ಹೊರಲು ಅಪ್ಪಣೆ ಮಾಡಿದರು. ಶರತ್‌ಚಂದ್ರನು ಅದನ್ನು ಮುಟ್ಟಲು ಹಿಂದು ಮುಂದು ನೋಡುತ್ತಿದ್ದನು. ಸ್ವಾಮೀಜಿ, ''ಭಯವಿಲ್ಲ, ಹಾಗೇ ಮಾಡು, ನಾನು ಆಜ್ಞೆ ಮಾಡಿದ್ದೇನೆ'' ಎಂದರು. ಆನಂದಚಿತ್ತನಾಗಿ ಶರತ್ ಅವರ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸಿದನು. ದಾರಿಯಲ್ಲಿ ಅವನಿಗೆ, ''ಪರಮಹಂಸರು ಇವೊತ್ತು ನಿನ್ನ ತಲೆಯ ಮೇಲೆ ಹತ್ತಿ ನಿಂತು ನಿನಗೆ ಆಶೀರ್ವಾದ ಮಾಡಿದ್ದಾರೆ. ಹುಷಾರ್! ಇಂದಿನಿಂದ ಮತ್ತೆ ಯಾವುದಾದರೂ ಅನಿತ್ಯ ವಿಷಯದಲ್ಲಿ ಮನಸ್ಸು ಕೊಟ್ಟೀಯೆ'' ಎಂದರು.

*(ಮುಂದಿನ ಸಂಚಿಕೆಗೆ)*

# ಸಾವಿನಾಚೆಗೆ, ಚೈತನ್ಯದ ಬೆಳಕಿಗೆ

ಸ್ವಾಮಿ ವೀರೇಶಾನಂದ

(ಈ ನಾಟಕವನ್ನು ಕಠೋಪನಿಷತ್ತಿನ ಆಧಾರದ ಮೇಲೆ ರಚಿಸಲಾಗಿದೆ. ಕಠೋಪನಿಷತ್ತು ಉಪನಿಷತ್ತುಗಳಲ್ಲೆಲ್ಲ ಪ್ರಸಿದ್ಧವಾದುದು. ಇಲ್ಲಿ ಬಾಲಕ ನಚಿಕೇತನಿಗೆ ಮೃತ್ಯುದೇವತೆಯಾದ ಯಮರಾಜನೇ ಗುರು. ಇಲ್ಲಿ ಮೃತ್ಯುವೇ ಸಾವಿನ ಆಚೆಯ ಅಮೃತತ್ತ್ವವನ್ನು ಉಪದೇಶ ಮಾಡುತ್ತಿದ್ದಾನೆ. ಆ ಮೂಲಕ ಸಾವಿನ ಆಚೆಯ ಸತ್ಯ ತತ್ತ್ವದ ಅನಾವರಣ ಮಾಡಿಸುತ್ತಿದ್ದಾನೆ. ಹೀಗಾಗಿ ಇದು ಅತ್ಯಂತ ನಾಟಕೀಯ ಮೌಲ್ಯವನ್ನು ಹೊಂದಿದೆ. ನಚಿಕೇತನು ಎಲ್ಲರೂ ಹೆದರುವ ಸಾವಿಗೂ ಭಯಪಡದೆ, ಸಾವಿನ ಬಳಿಯೇ ಸಾವಿನ ರಹಸ್ಯವನ್ನು ತಿಳಿದುಕೊಳ್ಳುತ್ತಾನೆ. ಇದೇ ಇಲ್ಲಿರುವ ಸ್ವಾರಸ್ಯ.)

## ದೃಶ್ಯ ೧

*(ವೇದಿಕೆಯಲ್ಲಿ ತಿಳಿಬೆಳಕು ಹರಡಿದೆ. ಹಿಂಬದಿಯಲ್ಲಿ ವೇದಮಂತ್ರಗಳ ಪಾರಾಯಣ ಕೇಳಿಬರುತ್ತಿದೆ. ಇನ್ನೊಂದು ಕಡೆಯಿಂದ ಹಸುಗಳ 'ಅಂಬಾ, ಅಂಬಾ' ಎಂಬ ಶಬ್ದ ಕೂಡ ಕೇಳಿಬರುತ್ತಿದೆ. ಚಿಕ್ಕ ಹುಡುಗ ನಚಿಕೇತ ಆಳವಾಗಿ ಯೋಚಿಸುತ್ತ ಬರುತ್ತಿದ್ದಾನೆ. ಅವನ ಮುಖದಲ್ಲಿ ಆತಂಕ ಮನೆಮಾಡಿದೆ.)*

**ಹಿಂಬದಿಯ ಧ್ವನಿ:** ನೋಡಿದ್ರೇನಪ್ಪಾ, ವಾಜಶ್ರವಸರ ಯಾಗದ ವೈಭವ. ಯಾರೂ ಮಾಡದ ವಿಶ್ವಜಿತ್ತು ಯಾಗವನ್ನೇ ಅವರು ಮಾಡುತ್ತಿದ್ದಾರೆ. ಈ ಯಾಗದ ಮಹತ್ವ ಏನು ಗೊತ್ತೆ? ಇದನ್ನು ಮಾಡುವ ಯಜಮಾನ ತನ್ನಲ್ಲಿ ಇರುವುದೆಲ್ಲವನ್ನೂ ದಾನ ಮಾಡಿಬಿಡಬೇಕು. ವಾಜಶ್ರವಸರು ತಮ್ಮಲ್ಲಿರುವ ಹಸುಗಳನ್ನೆಲ್ಲ ದಾನ ಮಾಡುತ್ತಿದ್ದಾರಂತೆ. ನಮಗೂ ಒಂದು ಹಸು ಸಿಕ್ಕರೂ ಸಿಗಬಹುದು. ಹೋಗೋಣ, ಬನ್ನಿ.

**ನಚಿಕೇತ:** (ತನ್ನೊಳಗೇ) ನನ್ನ ತಂದೆ ಬಹುದೊಡ್ಡ ಯಾಗವನ್ನು ಮಾಡುತ್ತಿದ್ದಾನೆ. ಇದು ಬಹಳ ದೊಡ್ಡ ಯಾಗವಂತೆ. ಈ ಯಾಗದಲ್ಲಿ ಎಲ್ಲವನ್ನೂ ದಾನಮಾಡಬೇಕಂತೆ. ಹೀಗಾದಾಗ ಮಾತ್ರ ಯಜ್ಞದ ಫಲ ದೊರಕುವುದಂತೆ. ಆದರೆ ನನ್ನ ತಂದೆ ದಾನ ಮಾಡುತ್ತಿರುವ ದನಗಳನ್ನು ಈಗತಾನೇ ನಾನು ನೋಡಿಬಂದೆ. ಅವುಗಳೆಲ್ಲ ಬರಡು ದನಗಳು. ಅವುಗಳಿಗೆ ನೀರು ಕುಡಿಯುವುದಕ್ಕೂ ಶಕ್ತಿಯಿಲ್ಲ ; ಹುಲ್ಲು ತಿನ್ನುವುದಕ್ಕೂ ಬಲವಿಲ್ಲ. ಅಂಥ ವೃದ್ಧ ಹಸುಗಳನ್ನು ನನ್ನ ತಂದೆ ದಾನ ಮಾಡುತ್ತಿದ್ದಾನೆ. ಹೀಗೆ ಮಾಡುವುದರಿಂದ ನನ್ನ ತಂದೆ ಸುಖವನ್ನು ತಂದುಕೊಡುವ ಲೋಕಗಳಿಗೆ ಹೋಗುತ್ತೇನೆ ಎಂದುಕೊಂಡಿದ್ದಾನೆ. ಆದರೆ ನಿಜವಾಗಲೂ ಅವನು ದುಃಖವನ್ನು ತಂದುಕೊಡುವ ಲೋಕಗಳಿಗೇ ಹೋಗುತ್ತಾನೆ. ಇದನ್ನು ತಪ್ಪಿಸಬೇಕಾದುದು ಮಗನಾದ ನನ್ನ ಕರ್ತವ್ಯ. ಇದನ್ನು ಹೇಗೆ ತಾನೇ ಮಾಡುವುದು? 'ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು' ಎಂಬ ಶ್ರದ್ಧೆಯು ನನ್ನಲ್ಲಿ ಈಗ ಉತ್ಪನ್ನವಾಗಿದೆ. ಹೀಗಾಗಿ ನನ್ನ ತಂದೆಗೆ ಒಳ್ಳೆಯದನ್ನು ಮಾಡಲು ನಾನು ಏನನ್ನಾದರೂ ಮಾಡಲೇಬೇಕು. ಅದನ್ನು ಈಗಲೇ ಮಾಡಬೇಕು; ಒಡನೆಯೆ ಮಾಡಬೇಕು. ಏನು ಮಾಡಲಿ? ಏನು ಮಾಡಲಿ?

**ವಾಜಶ್ರವಸ್ :** (ಅವಸರ ಅವಸರವಾಗಿ ಬರುತ್ತಿರುವವನು) ಹಸುಗಳನ್ನೆಲ್ಲ ಕೊಟ್ಟಿಗೆಯಿಂದ ಯಜ್ಞಶಾಲೆಗೆ ತಂದಾಯಿತು. ಈಗ ಅವುಗಳನ್ನು ದಾನ ಮಾಡುವ ಸಮಯ ಬಂದಿದೆ. ಆ ಕಡೆಗೇ ನಾನು ಹೋಗುತ್ತಿದ್ದೇನೆ.

**ನಚಿಕೇತ :** ಅಪ್ಪಾ, ಅಪ್ಪಾ,

**ವಾಜಶ್ರವಸ್ :** ಏನು ಮಗೂ, ನಾನು ಈಗ ಬಹಳ ಅವಸರದಲ್ಲಿದ್ದೇನೆ. ಆಮೇಲೆ ಮಾತನಾಡಿದರೆ ಆಗುವುದಿಲ್ಲವೆ?

**ನಚಿಕೇತ :** ಅಪ್ಪಾ, ಇದು ಕೂಡ ಬಹಳ ಅವಸರವಾದ ವಿಷಯ. ನಿಮ್ಮ ಜೊತೆಗೆ ನಾನು ಮಾತನಾಡಲೇಬೇಕು.

**ವಾಜಶ್ರವಸ್ :** ಮಗೂ, ನೀನು ಬಹಳ ಹಠ ಮಾಡುತ್ತಿದ್ದೀಯೆ. ಆಯಿತು, ಹೇಳು. ಏನು ಬೇಕು? ಬೇಗನೆ ಕೇಳು.

**ನಚಿಕೇತ :** ಅಪ್ಪಾ, ಈ ಯಾಗದಲ್ಲಿ ನೀನು ಎಲ್ಲವನ್ನೂ ದಾನ ಮಾಡುತ್ತಿದ್ದೀಯೆ. ಈಗ ಹೇಳು. ನನ್ನನ್ನು ಯಾರಿಗೆ ದಾನ ಮಾಡುತ್ತೀಯಾ?

**ವಾಜಶ್ರವಸ್:** ನಿನ್ನನ್ನು ದಾನ ಮಾಡುವುದೆ! ಏನಿದು, ಮುಠ್ಠಾಳನಂತೆ ಮಾತನಾಡುತ್ತಿದ್ದೀಯೆ. ನಾನು ನಿನ್ನನ್ನು ದಾನ ಮಾಡಲು ಆಗುವುದೇನು? (ಹೊರಡಲು ಅನುವಾಗುವನು)

**ನಚಿಕೇತ:** (ತಂದೆಯ ಕೈಯನ್ನು ಹಿಡಿದು ಎಳೆದಾಡುತ್ತ) ಅಪ್ಪಾ, ನನ್ನನ್ನು ಯಾರಿಗೆ ದಾನ ಮಾಡುತ್ತೀಯೆ?

**ವಾಜಶ್ರವಸ್:** ಇದೇನಿದು, ಅರ್ಥವಿಲ್ಲದ ಮಾತನ್ನು ಆಡುತ್ತಿದ್ದೀಯೆ. ಹೋಗು, ಹೋಗು. ಆಟವಾಡಿಕೋ.

**ನಚಿಕೇತ :** ( ಮತ್ತೂ ತನ್ನ ತಂದೆಯನ್ನು ಪೀಡಿಸುತ್ತ) ನಾನು ನಿಮ್ಮ ಸ್ವತ್ತು. ನೀನು ನನ್ನನ್ನೂ ದಾನ ಮಾಡಲೇಬೇಕು. ಹೇಳು, ಬೇಗ ಹೇಳು. ನನ್ನನ್ನು ಯಾರಿಗೆ ದಾನ ಮಾಡುತ್ತೀಯೆ?

**ವಾಜಶ್ರವಸ್:** (ಕೋಪಗೊಂಡು, ನಚಿಕೇತನಿಂದ ಕೈಗಳನ್ನು ಬಿಡಿಸಿಕೊಂಡು) ಹೋಗು, ಹೋಗು, ನಿನ್ನನ್ನು ಮೃತ್ಯುದೇವತೆಯಾದ ಯಮನಿಗೇ ದಾನಮಾಡಿದ್ದೇನೆ. ಬಿಡು ನನ್ನನ್ನು, ಬಿಡು ನನ್ನನ್ನು ಈಗ. (ಅವಸರ ಅವಸರವಾಗಿ ಹೋಗುವನು)

**ನಚಿಕೇತ:** (ದುಃಖದ ಭಾವದಿಂದ) ಇದೇನಿದು, ನನ್ನ ತಂದೆ ಏನು ತಾನೇ ಹೇಳಿಬಿಟ್ಟನು! ನನ್ನನ್ನು ಯಮನಿಗೆ ದಾನ ಮಾಡಿಬಿಟ್ಟನಲ್ಲಾ! ಯಮನೆಂದರೆ ಸಾವಿನ ದೇವತೆ. ಅವನ ಹತ್ತಿರ ಹೋಗಬೇಕು ಎಂದರೆ ನಾನು ಸಾಯಬೇಕು. ಅಂಥ ತಪ್ಪನ್ನು ನಾನು ಏನು ತಾನೇ ಮಾಡಿದೆ? ನಾನು ನನ್ನ ಸಹಪಾಠಿಗಳ ಮಧ್ಯೆ ಕೆಲವೊಮ್ಮೆ ಉತ್ತಮನಾಗಿಯೇ ವರ್ತಿಸಿದ್ದೇನೆ. ಕೆಲವೊಮ್ಮೆ ಮಧ್ಯಮನಾಗಿದ್ದೆ. ಆದರೆ

ಎಂದಿಗೂ ನಾನು ಎಲ್ಲರಿಗಿಂತ ಅಧಮನಾಗಿ ನಡೆದುಕೊಂಡಿಲ್ಲ. ತಕ್ಕಮಟ್ಟಿಗೆ ನಾನು ಒಳ್ಳೆಯ ರೀತಿಯಲ್ಲಿಯೇ ನಡೆದುಕೊಂಡಿದ್ದೇನೆ. ಈಗ ನನ್ನ ತಂದೆಯು ನನ್ನನ್ನು ಯಮರಾಜನಿಗೆ ದಾನ ಮಾಡಿಬಿಟ್ಟಿದ್ದಾನೆ. ಈಗ ನನಗೆ ಒಂದು ಸಂದೇಹ ಕಾಡುತ್ತಿದೆ. ನನ್ನನ್ನು ಇಟ್ಟುಕೊಂಡು, ಯಮನು ಏನು ಮಾಡುತ್ತಾನೆ? ನಾನು ಇನ್ನೂ ಚಿಕ್ಕ ಹುಡುಗ. ನನ್ನಿಂದ ಯಮನಿಗೆ ಏನು ತಾನೇ ಪ್ರಯೋಜನ ಇದ್ದೀತು? ( ಹೀಗೆ ಯೋಚಿಸುತ್ತ ತೆರೆಯ ಹಿಂದೆಯ ಹೋಗುವನು.)

*(ಮತ್ತೆ ವಾಜಶ್ರವಸನು ನಿರಾಳವಾಗಿ ಬರುತ್ತಿದ್ದಾನೆ. ಹಿಂದಿನಿಂದಲೇ ನಚಿಕೇತ ಅವನ ಹಿಂದೆಯೇ ಓಡಿ ಬರುತ್ತಿದ್ದಾನೆ)*

**ನಚಿಕೇತ :** ಅಪ್ಪಾ, ಅಪ್ಪಾ ನೀನು ನನ್ನನ್ನು ಯಮನಿಗೆ ದಾನ ಮಾಡಿದ್ದೀಯಲ್ಲಪ್ಪಾ. ನಾನು ಅವನ ಹತ್ತಿರ ಹೋಗುತ್ತಿದ್ದೇನೆ. ನನ್ನನ್ನು ಆಶೀರ್ವಾದ ಮಾಡಿ ಕಳುಹಿಸಿಕೊಡಪ್ಪಾ.

**ವಾಜಶ್ರವಸ್:** (ಧಿಗ್ಭ್ರಮೆಗೊಂಡು) ಏನು, ಏನು ಹೇಳುತ್ತಿದ್ದೀಯೆ? ನಾನು ನಿನ್ನ ಮೇಲೆ ಸಿಟ್ಟು ಮಾಡಿಕೊಂಡು ಹೇಳಿದೆ, ಅಷ್ಟೇ. ಯಮನ ಹತ್ತಿರ ಹೋಗುತ್ತೀಯಾ? ಯಮನ ಹತ್ತಿರ ಹೋಗುವುದು ಎಂದರೆ ಏನೆಂದು ನಿನಗೆ ಗೊತ್ತೇನು? ಸತ್ತುಹೋಗುವುದು. ಏನಪ್ಪಾ ಇದು. ಹುಚ್ಚು ಹುಚ್ಚಾಗಿ ಮಾತನಾಡುತ್ತಿದ್ದೀಯೆ.

**ನಚಿಕೇತ :** ಅಪ್ಪಾ, ನೀನು ಯಜ್ಞವಿಧಿಯನ್ನು ಕೈಗೊಂಡಾಗ ಹೇಳಿದ ಮಾತು ಎಂದಿಗೂ ಸುಳ್ಳಾಗಬಾರದು. ನೀನು ಆಡಿದ ಮಾತಿಗೆ ತಪ್ಪಿದರೆ ಬಹಳ ದೊಡ್ಡ ತಪ್ಪು ಮಾಡಿದ ಹಾಗಾಗುತ್ತದೆ. ಅಪ್ಪಾ, ನಿಮ್ಮ ಪೂರ್ವಿಕರು ಹೇಗೆ ಸತ್ಯವನ್ನೇ ನುಡಿದು, ಆಚಾರದಲ್ಲಿ ಆದರ್ಶವನ್ನು ಮೆರೆದಿದ್ದಾರೆ ಎಂಬುದನ್ನು ನೆನಪಿಸಿಕೊ. ಇದಲ್ಲದೆ, ಈಗಿನ ಕಾಲದಲ್ಲಿಯೂ ಸಜ್ಜನರು ಹೇಗೆ ನಡೆದುಕೊಳ್ಳುತ್ತಿದ್ದಾರೆ ಎಂಬುದನ್ನು ಯೋಚಿಸಿ ನೋಡು. ಅವರೆಂದೂ ಆಡಿದ ಮಾತಿಗೆ ತಪ್ಪಿದವರಲ್ಲ. ಅವರಂತೆಯೇ ನೀನೂ ಕೂಡ ನಡೆದುಕೊಳ್ಳಬೇಕಲ್ಲವೆ? ಇದಕ್ಕೆ ವಿರುದ್ಧವಾಗಿ ದುರ್ಜನರ ನಡತೆಯನ್ನು ನೋಡು. ಸುಳ್ಳಾಡುತ್ತ, ಆಡಿದ ಮಾತಿಗೆ ತಪ್ಪಿದವನು ಜನನ-ಮರಣಗಳ ಚಕ್ರದಲ್ಲಿ ಸಿಕ್ಕು ನರಳುತ್ತಾನೆ. ಅಂಥವನು ಸಸ್ಯದಂತೆ ಪಕ್ವವಾಗುತ್ತಾನೆ, ಅಂದರೆ ಮುದಿಯಾಗಿ ಸಾಯುತ್ತಾನೆ. ಸತ್ತು, ಸಸ್ಯದಂತೆ ಮತ್ತೆ ಹುಟ್ಟುತ್ತಾನೆ. ಹೀಗೆ ಜೀವಿಗಳು ಅನಿತ್ಯವಾದ ಸಂಸಾರದ ಚಕ್ರದಲ್ಲಿ ಸಿಕ್ಕು ನರಳುತ್ತಿದ್ದಾರೆ. ಅಂಥವರಲ್ಲಿ ಒಬ್ಬನಾಗಬೇಕೆಂದು ನೀನು ಬಯಸುತ್ತೀಯೇನು? ಸಂಸಾರದ ಕೂಪದಲ್ಲಿ ನರಳಿ ಸಾಯುವಿಯೇನು? ಅಪ್ಪಾ, ಯೋಚಿಸಿ ನೋಡು. ಸತ್ಯವನ್ನು ಕಾಪಾಡಿಕೊ. ಆಡಿದ ಮಾತಿಗೆ ತಪ್ಪಬೇಡ. ನನ್ನನ್ನು ಯಮನ ಹತ್ತಿರ ಧಾರಾಳವಾಗಿ ಕಳಿಸಿಕೊಡು. ನಾನು ನಿನಗೆ ಆಶ್ವಾಸನೆ ಕೊಡುತ್ತೇನೆ. ನನಗೆ ಏನೂ ಆಗುವುದಿಲ್ಲ. ನನ್ನ ಶ್ರದ್ಧೆ ಮತ್ತು ಸಚ್ಚಾರಿತ್ರ್ಯಗಳೇ ನನ್ನನ್ನು ಕಾಪಾಡುತ್ತವೆ. ನಿನ್ನ ಮಾತನ್ನು ಉಳಿಸಿಕೊ. ಧರ್ಮವನ್ನು ಕಾಪಾಡಿಕೋ. ಧರ್ಮ ನಿನ್ನನ್ನು ಕಾಪಾಡುತ್ತದೆ.

**ವಾಜಶ್ರವಸ್ :** (ಕಣ್ಣೀರು ಸುರಿಸುತ್ತ, ಗದ್ಗದ ಧ್ವನಿಯಲ್ಲಿ) ಮಗೂ, ಎಂಥ ಅನಾಹುತವಾಯಿತು! ನಿನ್ನನ್ನು ಯಮನ ಹತ್ತಿರ ಹೇಗೆ ತಾನೇ ಕಳಿಸಿಕೊಡಲಿ? ಮಗೂ ನಿನ್ನ ಶ್ರದ್ಧೆಯೇ ನಿನ್ನನ್ನು ಕಾಪಾಡಲಿ. ನಮ್ಮ ಪೂರ್ವಿಕರ ಧರ್ಮವೇ ನಿನ್ನನ್ನು ಕಾಪಾಡಲಿ. ಹೋಗಿ ಬಾಪ್ಪ, ಹೋಗಿ ಬಾ.

(ಭಾವುಕನಾಗಿ ಮಗನನ್ನು ತಡವುತ್ತಾನೆ. ತಂದೆಗೆ ವಿನಯದಿಂದ ನಮಸ್ಕರಿಸಿ, ನಚಿಕೇತನು ಗಂಭೀರ ಭಾವದಿಂದ ಹೊರಡುತ್ತಾನೆ. ವಾಜಶ್ರವಸ್ ದುಃಖದಿಂದ ಬೀಳ್ಕೊಡುತ್ತಾನೆ.)

## ದೃಶ್ಯ ೨

(ಎಲ್ಲೆಲ್ಲೂ ಗಾಢಾಂಧಕಾರ. ಅದರ ಮಧ್ಯೆ ಕೆಂಪು ಬೆಳಕು. ಹಿಂಬದಿಯಲ್ಲಿ ಆರ್ತನಾದದ ಕೂಗು. ನೆರಳು-ಬೆಳಕುಗಳ ಆಟ. ನಚಿಕೇತನು ಯಮನ ಮನೆಯ ಹೊಸ್ತಿಲಿನ ಮೇಲೆ ಕುಳಿತಿದ್ದಾನೆ. ಅಲ್ಲಿಗೆ ಯಮನೇ ಬರುತ್ತಾನೆ. ನಚಿಕೇತನು ಅವನಿಗೆ ನಮಸ್ಕಾರ ಮಾಡುತ್ತಾನೆ.)

**ಯಮ :** ಇದೇನು, ಒಬ್ಬ ಮಾನವ ಬಾಲಕ ನನ್ನ ಮನೆಯ ಮುಂದೆ! ಸತ್ತವರು ಮಾತ್ರವೇ ಇಲ್ಲಿಗೆ ಬರಲು ಸಾಧ್ಯ! ಅವರೂ ಸ್ವರ್ಗಕ್ಕೋ, ನರಕಕ್ಕೋ ಹೋಗುತ್ತಾರೆ! ಈ ಬ್ರಾಹ್ಮಣ ವಟು ಸಜೀವವಾಗಿ ಇಲ್ಲಿ ಬಂದು ಕುಳಿತುಕೊಂಡಿದ್ದಾನಲ್ಲ! ಏನಿದು ಆಶ್ಚರ್ಯ! ಇದು ಭಗವಲ್ಲೀಲೆಯೇ ಸರಿ! ಇವನು ಖಂಡಿತವಾಗಿಯೂ ಸಾಧಾರಣ ಬಾಲಕನಲ್ಲ! ಇವನನ್ನು ನೋಡಿದರೆ ಸಂತೋಷವಾಗುತ್ತದೆ! ಹೇಗೆ ಅಗ್ನಿಯಂತೆ ಬೆಳಗುತ್ತಿದ್ದಾನೆ! ಎಂಥ ತೇಜಸ್ಸು ಇವನದು!

*(ಅಷ್ಟರಲ್ಲಿ ಮನೆಯೊಳಗಿನಿಂದ ಯಮನ ಮಂತ್ರಿಯು ಓಡೋಡಿ ಬರುವನು. ಯಮನಿಗೆ ಕೈಮುಗಿದು ಹೇಳುವನು.)*

**ಮಂತ್ರಿ:** ಪ್ರಭೂ, ಈಗ ತಾನೇ ಬಂದಿರಾ? ಇದೋ ನೋಡಿ ಈ ಬ್ರಹ್ಮಚಾರಿಯನ್ನು. ಇವನು ಮೂರು ರಾತ್ರಿಗಳ ಕಾಲ ಆಹಾರವನ್ನೂ ಸ್ವೀಕರಿಸದೆ ಹೊಸ್ತಿಲಿನಲ್ಲೇ ಕುಳಿತಿದ್ದಾನೆ. ಎಷ್ಟು ಕೇಳಿಕೊಂಡರೂ ಒಳಕ್ಕೆ ಬಂದು ಊಟ ಉಪಚಾರಗಳನ್ನು ಸ್ವೀಕರಿಸುತ್ತಿಲ್ಲ. ನಿಮ್ಮನ್ನು ನೋಡದೆ, ಒಂದು ಹನಿ ನೀರನ್ನೂ ತೆಗೆದುಕೊಳ್ಳಲಾರೆ ಎಂದು ಹಠ ಹಿಡಿದು ಕುಳಿತಿದ್ದಾನೆ. ಯಮಧರ್ಮರಾಜ, ಬೇಗ ಬೇಗ ಇವನನ್ನು ಒಳಕ್ಕೆ ಕರೆತನ್ನಿ. ಈ ಬ್ರಾಹ್ಮಣ ಬಾಲಕ ನಮ್ಮ ಅತಿಥಿ. ಬೆಂಕಿಯಂತೆ ಮನೆಯನ್ನು ಪ್ರವೇಶಿದ್ದಾನೆ. ಅಪಚಾರವಾದರೆ, ಈ ಮನೆಯನ್ನೇ ಅವನು ಸುಟ್ಟುಬಿಡುತ್ತಾನೆ. ಬ್ರಾಹ್ಮಣ ಅತಿಥಿಗೆ ಅಪಚಾರವಾದರೆ, ನಾವು ಮಾಡಿದ ಒಳ್ಳೆಯ ಕೆಲಸಗಳ ಫಲವೇ ಸುಟ್ಟುಹೋಗಿಬಿಡುತ್ತದೆ. ಯಾರ ಮನೆಯಲ್ಲಿ ಅತಿಥಿಯು ಊಟ ಮಾಡದೆ ಇರುತ್ತಾನೆಯೋ, ಅಂಥ ಅಲ್ಪಬುದ್ಧಿಯವನು ಮಾಡಿದ ಎಲ್ಲ ಯಜ್ಞಯಾಗಾದಿಗಳೂ, ಒಳ್ಳೆಯ ಕೆಲಸಗಳೂ ನೀರಿನಲ್ಲಿ ಹೋಮ ಮಾಡಿದಂತೆ ವ್ಯರ್ಥವಾಗಿ ಹೋಗಿಬಿಡುತ್ತವೆ. ಆದ್ದರಿಂದ ಪ್ರಭೂ, ಕಾಲು ತೊಳೆಯಲು ನೀರನ್ನು ತರುತ್ತೇನೆ. ಈ ಬ್ರಾಹ್ಮಣ ಅತಿಥಿಗೆ ಪಾದ್ಯವನ್ನು ಕೊಟ್ಟು ಸ್ವಾಗತಿಸಿರಿ, ತ್ವರೆ ಮಾಡಿ.

*(ಮಂತ್ರಿಯು ತಂದುಕೊಟ್ಟ ಬಿಂದಿಗೆಯಿಂದ ಯಮನು ನೀರನ್ನು ಹಾಕಿ, ನಚಿಕೇತನ ಕಾಲುಗಳನ್ನು ತೊಳೆಯುವನು. ಮನೆಯೊಳಗೆ ಗೌರವದಿಂದ ಬರಮಾಡಿಕೊಳ್ಳುವನು. ಅವನನ್ನು ಒಳ್ಳೆಯ ಆಸನದಲ್ಲಿ ಕುಳ್ಳಿರಿಸಿ, ಹಾಲು-ಹಣ್ಣುಗಳನ್ನು ಸಮರ್ಪಿಸುವನು. ತಾನೂ ಪಕ್ಕದ ಆಸನದಲ್ಲಿ ಕುಳಿತುಕೊಳ್ಳುವನು. ನಚಿಕೇತನು ಆಹಾರವನ್ನು ಸ್ವೀಕರಿಸುತ್ತಾನೆ. ಈಗ ಯಮನು ಮೃದುವಾದ ಧ್ವನಿಯಿಂದ ಹೇಳುತ್ತಾನೆ.)*

**ಯಮ:** ಮಗೂ, ಓ ಬ್ರಾಹ್ಮಣ ವಟುವೇ, ನೀನು ನನ್ನ ಮನೆಯ ಅತಿಥಿ. ನಮಸ್ಕಾರಕ್ಕೆ ಯೋಗ್ಯನಾದವನು. ನೀನು ಮೂರು ರಾತ್ರಿಗಳು ಊಟ ಮಾಡದೆ ನನ್ನ ಮನೆಯಲ್ಲಿ ವಾಸಮಾಡಿಕೊಂಡಿರುವೆ. ಇದರಿಂದ ನನಗೆ ದುರದೃಷ್ಟ ಒದಗಿಬರುವುದು. ಇದನ್ನು ಸರಿಪಡಿಸಿಕೊಳ್ಳುವುದು ನನ್ನ ಕರ್ತವ್ಯ. ಈ ಮೂರು ರಾತ್ರಿಗಳಿಗೆ ಸಮನಾಗಿ, ನಿನಗೆ

ಮೂರು ವರಗಳನ್ನು ಕೊಡುತ್ತೇನೆ. ಓ ಬ್ರಾಹ್ಮಣನೇ, ನಿನಗೆ ನಮಸ್ಕಾರವಿರಲಿ! ಈ ವರಗಳನ್ನು ನೀಡುವುದರಿಂದ ನನಗೆ ಮಂಗಳ ವಾಗಲಿ! ಮಗೂ, ದಯವಿಟ್ಟು ಮೂರು ವರಗಳನ್ನು ಕೇಳು.

**ನಚಿಕೇತ:** (ಯಮನಿಗೆ ಬಾಗಿ ನಮಸ್ಕರಿಸುತ್ತ) ಮೃತ್ಯುದೇವತೆಯೇ, ನಿನ್ನ ವರಗಳಿಗಾಗಿ ಕೃತಜ್ಞನಾಗಿದ್ದೇನೆ. ಈಗ ನಾನು ಮೊದಲನೆಯ ವರವನ್ನು ಕೇಳುತ್ತೇನೆ. ದಯವಿಟ್ಟು ದಯಪಾಲಿಸು. ನಾನು ಹಿಂತಿರುಗಿ ಹೋದಮೇಲೆ ನನ್ನ ತಂದೆಯಾದ ಗೌತಮನು ಶಾಂತನಾಗಿ ನನ್ನ ಬಳಿ ವ್ಯವಹರಿಸಲಿ; ಒಳ್ಳೆಯ ಮನಸ್ಸುಳ್ಳವನಾಗಿರಲಿ; ನನ್ನ ಮೇಲೆ ಅವನು ಯಾವುದೇ ಕೋಪವನ್ನೂ ತೋರದೆ ಇರಲಿ. ನಿನ್ನಿಂದ ಬೀಳ್ಕೊಂಡ ನನ್ನನ್ನು ಗುರುತಿಸಲಿ. ಇವನು ನನ್ನ ಮಗನೇ ಎಂದು ಅರಿತುಕೊಳ್ಳಲಿ. ನನ್ನ ಜೊತೆಗೆ ಸಂತೋಷದಿಂದ ಮಾತುಕತೆ ನಡೆಸಲಿ. ಒಟ್ಟಾರೆ ನನ್ನ ತಂದೆ ನನ್ನ ವಿಷಯದಲ್ಲಿ ಸುಪ್ರೀತನಾಗಿ ವರ್ತಿಸಲಿ. ಓ ಮೃತ್ಯುವೇ, ಇದೇ ನನ್ನ ಮೊದಲ ವರವಾಗಿದೆ.

**ಯಮ :** ಮಗೂ, ಖಂಡಿತವಾಗಿಯೂ ನಾನು ನಿನ್ನನ್ನು ನಿನ್ನ ತಂದೆಯ ಬಳಿಗೆ ಕಳಿಸಿಕೊಡುತ್ತೇನೆ. ನಿನ್ನನ್ನು ಕಂಡು ಅವನು ಕೋಪಗೊಳ್ಳುವುದಿಲ್ಲ, ಅವನು ಮೊದಲಿನಂತೆಯೇ ನಿನ್ನ ಮೇಲೆ ಪ್ರೀತಿಯನ್ನು ತೋರುವನು. ಸಂತೋಷದಿಂದ ವರ್ತಿಸುವನು. ರಾತ್ರಿಕಾಲದಲ್ಲಿ ಅವನು ಸುಖವಾಗಿ ನಿದ್ರಿಸುತ್ತಾನೆ. ಮಗೂ, ಮರೆಯಬೇಡ. ನೀನು ಸಾವಿನ ಹಿಡಿತದಿಂದಲೇ ಬಿಡಿಸಿಕೊಂಡು ಹೋಗುತ್ತಿರುವೆ. ಇದರಿಂದ ನಿನ್ನನ್ನು ಕಂಡು ನಿನ್ನ ತಂದೆಗೆ ಖಂಡಿತವಾಗಿಯೂ ಸಂತೋಷವಾಗುತ್ತದೆ; ಅವನಿಗೆ ನಿನ್ನ ಮೇಲೆ ಯಾವ ದ್ವೇಷಕೋಪಗಳೂ ಇರುವುದಿಲ್ಲ. ಮಗೂ, ನೀನು ನಿಶ್ಚಿಂತೆಯಿಂದ ನಿನ್ನ ತಂದೆಯ ಮನೆಗೆ ಹೋಗಬಹುದು. ಮಗೂ, ಈಗ ನೀನು ಎರಡನೆಯ ವರವನ್ನು ಕೇಳು.

**ನಚಿಕೇತ:** ಮೃತ್ಯುದೇವತೆಯೇ, ಸ್ವರ್ಗಲೋಕದಲ್ಲಿ ಭಯವೇ ಇರುವುದಿಲ್ಲ ಎಂದು ನಾನು ಕೇಳಿದ್ದೇನೆ. ಅಲ್ಲಿ ರೋಗರುಜಿನಗಳೂ ಇರುವುದಿಲ್ಲ. ಇದಲ್ಲದೆ ಎಲ್ಲರಿಗೂ ಭಯಕಾರಣನಾದ ಮೃತ್ಯುವಾದ ನೀನು ಕೂಡ ಅಲ್ಲಿ ಜನರ ಮೇಲೆ ಕೈಮಾಡುವುದಿಲ್ಲ. ಈ ಲೋಕದಲ್ಲಿ ಜನರು ಮುಪ್ಪು, ರೋಗಗಳಿಂದ ನರಳುತ್ತಾರೆ; ಭಯಗ್ರಸ್ತರಾಗಿ ಬಾಳುತ್ತಾರೆ. ಸ್ವರ್ಗಲೋಕದಲ್ಲಿ ಈ ಭಯವು ಇರುವುದಿಲ್ಲ. ಇಲ್ಲಿ ಮನುಷ್ಯನು ಹಸಿವೆ, ಬಾಯಾರಿಕೆಗಳನ್ನು ಮೀರಿಹೋಗುತ್ತಾನೆ. ಶೋಕವನ್ನು ಅತಿಕ್ರಮಿಸಿ ಹೋಗುತ್ತಾನೆ. ಎಲ್ಲ ರೀತಿಯ ಮಾನಸಿಕ ದುಃಖಗಳಿಂದ ಪಾರಾಗುತ್ತಾನೆ. ಆದಿತ್ಯಲೋಕ ಎಂದೆನಿಸಿದ ಸ್ವರ್ಗಲೋಕದಲ್ಲಿ ಅವನು ಆನಂದದಿಂದ ಇರುತ್ತಾನೆ; ಹರ್ಷದಿಂದ ಕೂಡಿರುತ್ತಾನೆ. ಮೃತ್ಯುದೇವತೆಯೇ, ಸ್ವರ್ಗವನ್ನು ನೀಡುವ ಅಗ್ನಿವಿದ್ಯೆಯನ್ನು ನೀನು ತಿಳಿದಿರುವೆ. ಅದನ್ನು ಚೆನ್ನಾಗಿ ಅಧ್ಯಯನ ಮಾಡಿದ್ದೀಯೆ. ನಾನು ಇದನ್ನು ತಿಳಿದುಕೊಳ್ಳಬೇಕು ಎಂಬ ಅಪಾರ ಶ್ರದ್ಧೆಯಿಂದ ಕೂಡಿದ್ದೇನೆ. ದಯವಿಟ್ಟು ಅದನ್ನು ನನಗೆ ಹೇಳಿಕೊಡು. ಸ್ವರ್ಗಲೋಕದಲ್ಲಿ ಜನರು ದೀರ್ಘಕಾಲದವರೆಗೆ ಸುಖವಾಗಿ ಜೀವನ ಮಾಡುತ್ತಾರೆ. ಇದೇ ನಾನು ಕೇಳುವ ಎರಡನೆಯ ವರ.

**ಯಮ:** ನಚಿಕೇತನೇ, ಸ್ವರ್ಗವನ್ನು ತಂದುಕೊಡುವ ಅಗ್ನಿಯನ್ನು ನಿನಗೆ ಹೇಳಿಕೊಡುತ್ತೇನೆ. ಇದನ್ನು ನನ್ನಿಂದ ತಿಳಿದುಕೋ. ಮಗೂ, ಈ ಅಗ್ನಿವಿದ್ಯೆಯು ಸಾಧಾರಣವಾದುದಲ್ಲ. ಈ ಅಗ್ನಿವಿದ್ಯೆಯನ್ನು ಬಲ್ಲ ಉಪಾಸಕರ ಹೃದಯದಲ್ಲಿ ವಿರಾಟ್‌ಪುರುಷನ ಸಾಕ್ಷಾತ್ಕಾರವೇ ಆಗಿಬಿಡುತ್ತದೆ. ಇದರಿಂದ ಅವನು ಅಪಾರವಾದ ಆನಂದ ಸುಖಗಳನ್ನು ಪಡೆಯುತ್ತಾನೆ. ನಚಿಕೇತ, ನಾನು ನಿನಗೆ ಅಗ್ನಿವಿದ್ಯೆಯನ್ನು ಹೇಳಿಕೊಡುತ್ತೇನೆ. ಕೇಳು.

*(ನಚಿಕೇತನು ಯಮನ ಹತ್ತಿರ ಬರುವನು. ನಚಿಕೇತನ ಕಿವಿಯಲ್ಲಿ ಯಮನು ಅಗ್ನಿವಿದ್ಯೆಯ ರಹಸ್ಯವನ್ನು ಅರುಹುವನು. ನಚಿಕೇತನು ಸಂತಸವನ್ನು ವ್ಯಕ್ತಪಡಿಸುವನು. ಯಮನ ಮುಂದೆ ಮಂಡಿಯೂರಿ ನಿಲ್ಲುವನು.)*

**ಯಮ:** ಮಗೂ, ನಾನು ಹೇಳಿದ್ದನ್ನು ಪುನರುಚ್ಚರಿಸಬಲ್ಲೆಯಾ? ಹೇಳು ನೋಡೋಣ.

*(ನಚಿಕೇತನು ಯಮನ ಬಳಿಗೆ ಬಂದು ಅವನ ಕಿವಿಯಲ್ಲಿ ಅವನು ಹೇಳಿಕೊಟ್ಟಿದ್ದನ್ನು ಪುನರುಚ್ಚರಿಸುವನು. ಯಮನು ಆನಂದದಿಂದ ತಲೆಯಲ್ಲಾಡಿಸುವನು. ನಚಿಕೇತನು ಮತ್ತೆ ತನ್ನ ಸ್ವಸ್ಥಾನಕ್ಕೆ ಮರಳುವನು.)*

**ಯಮ :** ಮಗೂ, ನಿನ್ನ ಮೇಧಾವಿತನ ಮತ್ತು ಶ್ರದ್ಧೆಗಳನ್ನು ಕಂಡು ನಾನು ಸುಪ್ರೀತನಾಗಿದ್ದಾನೆ. ನಾನು ಈಗಾಗಲೇ ನೀಡಿರುವ ಮೂರು ವರಗಳಲ್ಲದೆ, ನಿನಗೆ ಇನ್ನೊಂದು ವರವನ್ನು ಕೊಡುವ ಇಚ್ಛೆಯಾಗುತ್ತಿದೆ. ಅದನ್ನು ನಾನು ಈಗಲೇ ಕೊಡುತ್ತಿದ್ದೇನೆ. ಮಗೂ, ಇನ್ನುಮುಂದೆ ಈ ಅಗ್ನಿವಿದ್ಯೆಯು ನಿನ್ನ ಹೆಸರಿನಿಂದಲೇ ಪ್ರಸಿದ್ಧವಾಗುವುದು. ಅಂದರೆ, ಇದಕ್ಕೆ 'ನಾಚಿಕೇತಾಗ್ನಿ' ಎಂದೇ ಹೆಸರು ಬರುವುದು. ಮಗೂ, ಇದಲ್ಲದೆ ಒಂದು ಬಹುಮಾನವನ್ನು ಕೂಡ ನಾನು ನೀಡುತ್ತಿದ್ದೇನೆ. ಇದೋ, ರತ್ನಮಯವಾದ, ವಿಚಿತ್ರರೂಪದಲ್ಲಿರುವ ಈ ಮಾಲೆಯನ್ನು ತೆಗೆದುಕೋ. ಇದನ್ನು ನಾನು ಸಂತೋಷದಿಂದ ನೀಡುತ್ತಿದ್ದೇನೆ. *(ತನ್ನ ಕೊರಳಿನಲ್ಲಿರುವ ರತ್ನಪ್ರಾಯವಾದ ಮಾಲೆಯನ್ನು ನಚಿಕೇತನಿಗೆ ನೀಡುವನು. ನಚಿಕೇತ ಅದನ್ನು ಸ್ವೀಕರಿಸುವನು.)*

ಮಗೂ, ಈ ಅಗ್ನಿವಿದ್ಯೆಯ ಪ್ರಯೋಜನವನ್ನು ಹೇಳುತ್ತೇನೆ, ಕೇಳು. ಯಾರು ನಾಚಿಕೇತ ಅಗ್ನಿಯನ್ನು ಚೆನ್ನಾಗಿ ಅಧ್ಯಯನ ಮಾಡಿ, ಅದರ ಜ್ಞಾನವನ್ನು ಪಡೆದುಕೊಂಡು, ಇದನ್ನು ಅನುಷ್ಠಾನಕ್ಕೆ ತರುತ್ತಾನೆಯೋ, ಅವನು ಎಲ್ಲ ರೀತಿಯ ಉಪದೇಶಗಳನ್ನೂ ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಾನೆ. ಅವುಗಳಿಂದ ಅವನ ಮನಸ್ಸು ಶುದ್ಧವಾಗುತ್ತದೆ. ಅವನು ಹುಟ್ಟುಸಾವುಗಳನ್ನು ದಾಟುತ್ತಾನೆ. ಸರ್ವಜ್ಞನೂ, ಹಿರಣ್ಯಗರ್ಭದಿಂದ ಹುಟ್ಟಿದವನೂ, ಜ್ಞಾನ ಮುಂತಾದ ಗುಣಗಳಿಂದ ಹೊಳೆಯುತ್ತಿರುವವನೂ ಆದ ಅಗ್ನಿದೇವನು ತನ್ನ ಸ್ವರೂಪವೆಂದೇ ಅವನು ತಿಳಿದುಕೊಳ್ಳುವನು. ಅಲ್ಲದೆ ಅಂಥವನು ಎಲ್ಲ ಪ್ರಾಪಂಚಿಕ ವಿಷಯಗಳಿಂದ ತನ್ನ ಮನಸ್ಸನ್ನು ತೆಗೆದುಕೊಂಡು, ಅಪಾರ ಶಾಂತಿಯನ್ನು ಪಡೆದುಕೊಳ್ಳುತ್ತಾನೆ. ಉಪಾಸನೆ ಮತ್ತು ಕರ್ಮ – ಇವುಗಳನ್ನು ಕೂಡಿಸಿಕೊಂಡು, ಹಿರಣ್ಯಗರ್ಭ ಪದವಿಯನ್ನು ಗಳಿಸಿಕೊಳ್ಳುತ್ತಾನೆ.

ಮಗೂ, ಈಗ ಮೂರನೆಯ ವರವನ್ನು ಕೇಳಿಕೋ. ಆ ವರವನ್ನೂ ನೀಡಲು ನನಗೆ ಸಂತೋಷವಾಗುತ್ತಿದೆ.

*(ನಚಿಕೇತನು ಧ್ಯಾನಮಗ್ನನಾಗುವನು. ಅವನ ಮನಸ್ಸಿನಲ್ಲಿ ಯಾವುದೋ ಗಂಭೀರ ಆಲೋಚನೆ ಏಳುತ್ತಿದೆ. ಅವನ ಆಲೋಚನೆಯ ಮಾತುಗಳು ಹಿಂಬದಿಯಲ್ಲಿ ಕೇಳಿಬರುತ್ತಿವೆ.)*

**ನಚಿಕೇತ** (ಮನಸ್ಸಿನಲ್ಲಿಯೇ) : ಇದುವರೆಗೆ ನಾನು ಕೇಳಿದ ವರಗಳೆಲ್ಲ ಸಂಸಾರಕ್ಕೆ ಸಂಬಂಧಪಟ್ಟವುಗಳು. ಉತ್ತಮವಾದ ಅಗ್ನಿವಿದ್ಯೆಯು ಕೂಡ ಜನನಮರಣಗಳ ಸಂಕೋ

ಲೆಗೆ ಸಿಕ್ಕಿರುವುದೇ ಆಗಿದೆ. ಏಕೆಂದರೆ, ಇದು ಕ್ರಿಯೆ, ಕಾರಕ, ಫಲಗಳನ್ನು ಒಳಗೊಂಡಿದ್ದೇ ಆಗಿದೆ. ಹೀಗಾಗಿ ಇದರ ಫಲವೂ ಕೂಡ ಅನಿತ್ಯವೇ ಆಗಿದೆ. ಆದ್ದರಿಂದ ಈ ವಿದ್ಯೆ ಕೂಡ ನಿತ್ಯವಾದ ಮುಕ್ತಿಯನ್ನು ನೀಡಲು ಸಾಧ್ಯವಿಲ್ಲ. ಯಾವ ವಿದ್ಯೆಯಿಂದ ನಿತ್ಯವಾದ ಆನಂದವನ್ನು ಪಡೆದುಕೊಳ್ಳಲು ಸಾಧ್ಯ? ಯಾವ ವಿದ್ಯೆಯಿಂದ ಆತ್ಯಂತಿಕ ಮುಕ್ತಿ ಹೊಂದಲು ಸಾಧ್ಯ? ಇದನ್ನೇ ಮೂರನೆಯ ವರವಾಗಿ ಕೇಳುತ್ತೇನೆ.

**ನಚಿಕೇತ:** (ಯಮನಿಗೆ ನಮಸ್ಕಾರ ಮಾಡುತ್ತ) ಮೃತ್ಯುದೇವತೆಯೇ, ಕೆಲವರು ಮನುಷ್ಯನು ಸತ್ತಮೇಲೆಯೂ ಇರುತ್ತಾನೆ ಎಂದು ಹೇಳುತ್ತಾರೆ. ಮನುಷ್ಯನು ಸರ್ವಥಾ ನಾಶವಾಗುತ್ತಾನೆ ಎಂದು ಇತರರು ಹೇಳುತ್ತಾರೆ. ಈ ಸಂಶಯವನ್ನು ನಿವಾರಿಸಲು ನಿನಗೆ ಮಾತ್ರ ಸಾಧ್ಯ. ಏಕೆಂದರೆ ನೀನು ಮೃತ್ಯುವಿನ ರಹಸ್ಯವನ್ನು ಬಲ್ಲವನಾಗಿದ್ದೀಯೆ. ಮೃತ್ಯುದೇವತೆಯೇ ಆಗಿದ್ದೀಯೆ. ದಯವಿಟ್ಟು ಇದನ್ನು ನನಗೆ ಉಪದೇಶ ಮಾಡು. ನೀನು ಮಾತ್ರ ಇದನ್ನು ಉಪದೇಶ ಮಾಡಲು ಸಮರ್ಥನಾಗಿದ್ದೀಯೆ. ನಿನ್ನಿಂದ ಉಪದೇಶ ಪಡೆದು, ಇದನ್ನು ತಿಳಿದುಕೊಳ್ಳಲು ನಾನು ಇಚ್ಛಿಸುತ್ತೇನೆ.

*(ಇದನ್ನು ಕೇಳಿ, ಯಮನ ಮುಖದಲ್ಲಿ ಆಶ್ಚರ್ಯ, ವಿಸ್ಮಯಗಳ ಭಾವ ಮೂಡುವುದು. ಅವನು ಕಣ್ಣುಮುಚ್ಚಿಕೊಂಡು, ಚಿಂತಿಸುವನು. ಅವನ ಹಣೆಯಲ್ಲಿ ಚಿಂತೆಯ ನೆರಿಗೆಗಳು ಮೂಡುವವು. ಹೀಗೆಯೇ ಸ್ವಲ್ಪಹೊತ್ತು ಕಳೆಯುವುದು.)*

**ಯಮ:** ಮಗೂ ಒಂದು ವಿಷಯ ಹೇಳುತ್ತೇನೆ. ತಪ್ಪು ತಿಳಿದುಕೊಳ್ಳಬೇಡ. ಸತ್ತ ಮೇಲೆ ಮನುಷ್ಯ ಏನಾಗುತ್ತಾನೆ ಎಂದು ಕೇಳಿದೆಯಲ್ಲ. ಈ ಬಗ್ಗೆ ದೇವತೆಗಳೂ ತಲೆ ಕೆಡಿಸಿಕೊಂಡಿದ್ದರು; ಅವರ ಮಧ್ಯೆಯೂ ಇದರ ಬಗ್ಗೆ ಎಷ್ಟೋ ಸಂದೇಹ ಇತ್ತು. ಇನ್ನು ಸಾಮಾನ್ಯ ಜನರ ಪಾಡೇನು? ಅವರು ಚೆನ್ನಾಗಿ ಆಲೋಚನೆ ಮಾಡಿದರೂ ಇದನ್ನು ತಿಳಿದುಕೊಳ್ಳಲು ಸಾಧ್ಯವೇ ಇಲ್ಲ. ಹೀಗೇಕೆ ಗೊತ್ತೆ? ಯಾವುದು ಸತ್ತಮೇಲೆಯೂ ಉಳಿಯುತ್ತದೆಯೋ, ಆ ಆತ್ಮವು ಎಲ್ಲಕ್ಕಿಂತ ಸೂಕ್ಷ್ಮವಾದುದು, ಅಣುವಾದುದು. ಇದನ್ನು ನೀನು ಅರಿತುಕೊಳ್ಳುವ ಸಾಧ್ಯ ಬಹಳ ಕಡಿಮೆ. ಆದ್ದರಿಂದ ಯಾವುದರಲ್ಲಿ ಪ್ರಯೋಜನದ ಬಗ್ಗೆ ಸ್ವಲ್ಪವೂ ಸಂದೇಹವೇ ಇಲ್ಲವೋ, ಅಂತಹ ಬೇರಾವುದಾದರೂ ಒಂದು ವಿಷಯವನ್ನು ಕೇಳಿ ತಿಳಿದುಕೋ. ಅದನ್ನೇ ವರವಾಗಿ ಕೊಡುತ್ತೇನೆ. ದಯವಿಟ್ಟು ಈ ವಿಷಯದಲ್ಲಿ ನನ್ನನ್ನು ನಿರ್ಬಂಧಿಸಬೇಡ. ನನಗೆ ಈ ವರವನ್ನೇ ಕೊಡಬೇಕು ಎಂದು ದಯವಿಟ್ಟು ಹಠ ಹಿಡಿಯಬೇಡ.

(ಇದನ್ನು ಕೇಳಿದ ನಚಿಕೇತನು ಬಹಳವೇ ಹತಾಶನಾಗುವನು. ಅವನ ಮುಖದಲ್ಲಿ ಅದು ಸ್ಪಷ್ಟವಾಗಿ ಕಾಣಬರುವುದು. ಸ್ವಲ್ಪಕಾಲದ ನಂತರ ಒಂದು ರೀತಿಯ ದೃಢನಿಶ್ಚಯದ ಭಾವನೆ ಅವನ ಮುಖದಲ್ಲಿ ಮೂಡುವುದು. ನಚಿಕೇತನು ಮತ್ತೆ ಕೈಮುಗಿದುಕೊಂಡು ಯಮನಿಗೆ ಹೇಳುವನು.)

**ನಚಿಕೇತ:** ಮೃತ್ಯುದೇವತೆಯೇ, ದೇವತೆಗಳೂ ಈ ವಿಷಯದಲ್ಲಿ ಹಿಂದೆ ಸಂದೇಹ ಪಟ್ಟಿದ್ದರಷ್ಟೇ. ಇದರಿಂದಲೇ ಈ ವಿದ್ಯೆ ಎಷ್ಟು ಅಮೂಲ್ಯವೆಂದು ತಿಳಿಯಬರುವುದು. ಹಾಗೆಯೇ ಇದು ತಿಳಿದುಕೊಳ್ಳಲು ಬಹಳ ಕಷ್ಟವಾದುದು ಎಂದು ಹೇಳಿದೆಯಷ್ಟೇ. ಹಾಗಾದರೆ ಎಂಥ ಮಹಾನ್ ಪಂಡಿತರಿಗೂ ಇದು ಗಹನವಾದ ತತ್ತ್ವ ಎಂದಾಯಿತು. ಇದನ್ನು ತಿಳಿದುಕೊಂಡಿರುವ ಒಬ್ಬನೇ ವ್ಯಕ್ತಿಯೆಂದರೆ ನೀನೇ ಎನ್ನುವುದು ಸ್ಪಷ್ಟವಾಯಿತು. ಹುಡುಕಿದರೂ ನಿನ್ನಂಥ ಮತ್ತೊಬ್ಬ ಜ್ಞಾನಿಯು ಸಿಕ್ಕಲಾರನು. ನಾನು ಕೇಳಿದ ಈ ವರವು ಮೋಕ್ಷಕ್ಕೆ ಕಾರಣವಾಗುತ್ತದೆ. ಹೀಗಾಗಿ ನಾನು ಕೇಳಿದ ವರಕ್ಕೆ ಸಮಾನವಾದ ವರ ಬೇರಾವುದೂ ಇಲ್ಲ. ಏಕೆಂದರೆ, ಈ ವರವೊಂದೇ ನಿತ್ಯವಾದ ಫಲವನ್ನು ನೀಡಲು ಸಾಧ್ಯ. ಬೇರೆಯ ಕೇಳಿಕೆಯೆಲ್ಲವೂ ಅನಿತ್ಯಫಲವುಳ್ಳವು.

*(ಯಮನು ನಚಿಕೇತನನ್ನೇ ಆಶ್ಚರ್ಯಚಕಿತನಾಗಿ ನೋಡುತ್ತಿದ್ದಾನೆ. ಅವನ ಮುಖದಲ್ಲಿ ವಿಸ್ಮಯ-ಆನಂದಗಳ ಮಿಶ್ರಣ. ಅವನು ಸ್ವಲ್ಪ ಆಲೋಚಿಸುವಂತೆ ಸುಮ್ಮನೆ ಕುಳಿತಿರುವನು. 'ಇಲ್ಲ, ಇಲ್ಲ' ಎಂದು ತಲೆಯಾಡಿಸುವನು. ನಚಿಕೇತನನ್ನು ಹತ್ತಿರ ಕರೆದು, ಅವನ ಮೈದಡವುತ್ತ, ಪ್ರೀತಿಯಿಂದ ಹೇಳುವನು.)*

**ಯಮ:** ಮಗೂ ಈ ಗಹನವಾದ ವಿಷಯವನ್ನು ಏಕಪ್ಪಾ ಕೇಳುತ್ತೀಯೆ. ಏನು ಬೇಕು, ಹೇಳು ನಿನಗೆ? ನಿನಗೆ ಆಯುಸ್ಸು ಬೇಕೆ? ನಿನಗೆ ಮಾತ್ರವಲ್ಲ, ನಿನ್ನ ಮಕ್ಕಳಷ್ಟೇ ಅಲ್ಲ , ನಿನ್ನ ಮೊಮ್ಮಕ್ಕಳು ಕೂಡ ನೂರು ವರ್ಷಗಳ ಕಾಲ ಚೆನ್ನಾಗಿ ಸಂಪದ್ಭರಿತರಾಗಿ ಬಾಳಿ ಬದುಕುವಂತೆ ವರ ಕೊಡುತ್ತೇನೆ. ಅಷ್ಟು ಮಾತ್ರವಲ್ಲ , ಹಸುಗಳೇ ಮುಂತಾದ ಅನೇಕ ಪಶುಗಳನ್ನು ನೂರಾರು ಸಾವಿರಾರು ಸಂಖ್ಯೆಯಲ್ಲಿ ನಿನಗೆ ಕೊಡುತ್ತೇನೆ. ಶ್ರೀಮಂತರ ಘನತೆಯ ವಿಷಯವಾದ ಆನೆಗಳನ್ನು ಕೊಡುತ್ತೇನೆ; ನೀನು ಕೇಳಿದಷ್ಟು ಬಂಗಾರವನ್ನೂ ಕೊಡುತ್ತೇನೆ. ನೂರಾರು ಕುದುರೆಗಳನ್ನೂ ಕೊಡುತ್ತೇನೆ. ಭೂಮಿಯ ದೊಡ್ಡ ಭಾಗವನ್ನು ನಿನಗೆ ಕೊಡುತ್ತೇನೆ. ಅದನ್ನು ನೀನು ದೊಡ್ಡ ರಾಜನಾಗಿ ಅನುಭವಿಸಬಹುದು. ಇವೆಲ್ಲವನ್ನೂ ನೀನು ಒಂದೇ ವರದಲ್ಲಿ ಕೇಳಿಕೊಳ್ಳಬಹುದು. 'ನನಗೆ ಆಯುಸ್ಸೇ ಇಲ್ಲದಿದ್ದರೆ ಇವುಗಳನ್ನೆಲ್ಲ ಅನುಭವಿಸುವುದು ಹೇಗೆ?' ಎಂದುಕೊಳ್ಳುವೆಯೇನು? ಈ ವರದಲ್ಲಿಯೇ, ಇಚ್ಛಾಮರಣವನ್ನೂ ನೀಡಿ ಬಿಡುತ್ತೇನೆ. ನೀನು ಎಷ್ಟು ವರ್ಷ ಕಾಲ ಬದುಕಲು ಇಚ್ಛಿಸುತ್ತೀಯೋ, ಅಷ್ಟು ವರ್ಷವೂ ನೀನು ಬದುಕಿರಬಹುದು. ಸುಮ್ಮನೆ ಬದುಕಿರುವುದಿಲ್ಲ. ಬದುಕಿರುವ ತನಕ ನಿನ್ನ ಇಂದ್ರಿಯಗಳೆಲ್ಲ ಶಕ್ತಿಯುತವಾಗಿರುತ್ತವೆ; ಅವುಗಳನ್ನೆಲ್ಲ ಚೆನ್ನಾಗಿ ಅಂಕೆಯಲ್ಲಿ ಇಟ್ಟುಕೊಂಡು, ಈ ಭೂಮಿಯಲ್ಲಿ ಸಿಗುವ ಎಲ್ಲ ಭೋಗಗಳನ್ನೂ ನೀನು ಭೋಗಿಸಬಹುದು. ಏನು ಹೇಳುತ್ತೀಯಾ?

*(ನಚಿಕೇತನು ಮಾತನಾಡದೆ ತಲೆಬಗ್ಗಿಸಿ ನಿಂತಿರುವನು. ಯಮನ ಅವನನ್ನು ಮತ್ತೆ ಮತ್ತೆ ತಡವಿದರೂ, ಅವನ ಮುಖದಿಂದ ಒಂದು ಮಾತೂ ಹೊರಡುವುದಿಲ್ಲ.)*

**ಯಮ:** ಮಗೂ, ನಚಿಕೇತ, ನಿನಗೆ ಈ ವರ ಬೇಡವೆ? ಹೋಗಲಿ ಬಿಡು. ಇದಕ್ಕೆ ಸಮಾನವಾದ ಇನ್ನಾವುದಾದರೂ ಒಂದು ವರವನ್ನು ಬೇಡಿಕೋ. ಅದನ್ನು ಕೊಡಲೂ ನಾನು ಸಿದ್ಧನಿದ್ದೇನೆ. ಎಷ್ಟು ಹಣ-ಸಂಪತ್ತು ನಿನಗೆ ಬೇಕು? ಕೇಳಿಕೋ. ಕೊಡುತ್ತೇನೆ. ಇಡೀ ಭೂಮಿಯನ್ನೇ ನಿನ್ನ ಅಧೀನವನ್ನಾಗಿ ಮಾಡಲು ಸಿದ್ಧನಿದ್ದೇನೆ. ತೆಗೆದುಕೋ. ರಾಜನಾಗಿ ಸುಖವಾಗಿ ಬಾಳು. ಮಗೂ, ನಚಿಕೇತ. ಇನ್ನೇನು ಹೇಳಲಿ, ಈ ಜಗತ್ತಿನಲ್ಲಿ ಯಾವ ಯಾವ ಕಾಮುಗಳಿವೆಯೋ, ನೀನು ಇಚ್ಛಿಸಿದಲ್ಲಿ, ಆ ಎಲ್ಲದಕ್ಕೂ ನಾನು ನಿನ್ನನ್ನು ಭಾಜನನನ್ನಾಗಿ ಮಾಡುತ್ತೇನೆ.

ಮಗೂ, ಮತ್ತೆ ಮತ್ತೆ ಹೇಳುತ್ತೇನೆ. ಈ ಮರ್ತ್ಯಲೋಕದಲ್ಲಿ ಯಾವ ಯಾವ ಕಾಮನೆಗಳು ಪಡೆದುಕೊಳ್ಳಲು ಅತ್ಯಂತ ದುರ್ಲಭವೋ, ಅವುಗಳೆಲ್ಲವನ್ನೂ ಕೇಳಿಕೋ. ಕೊಡುತ್ತೇನೆ. ನಚಿಕೇತ, ಏನು ತಾನೇ ನಿನಗೆ

ಬೇಕು? ಸುಂದರವಾದ, ಅತ್ಯಾಕರ್ಷಕರಾದ ಸ್ತ್ರೀಯರು, ರಥಗಳು, ವಾದ್ಯಗಳು— ಏನು ಬೇಕು ಹೇಳು. ಎಲ್ಲವನ್ನೂ ನಾನು ನೀಡಲು ಸಿದ್ಧನಿದ್ದೇನೆ. ಇವೆಲ್ಲವೂ ನನ್ನಂಥ ದೇವತೆಗಳ ಪ್ರಸಾದವಿಲ್ಲದೆ ನಿನಗೆ ದೊರಕುವಂಥದ್ದಲ್ಲ. ನಾನು ನಿನಗೆ ಕೊಡುವ ಪರಿಚಾರಿಣಿಯರಿಂದ ಸೇವೆಯನ್ನು ಧಾರಾಳವಾಗಿ ಮಾಡಿಸಿಕೋ. ಆದರೆ, ದಯವಿಟ್ಟು— ಓ ನಚಿಕೇತ, ಸತ್ತಮೇಲೆ ಮನುಷ್ಯನೊಬ್ಬನು ಇರುತ್ತಾನೋ ಇಲ್ಲವೋ ಎನ್ನುವುದನ್ನು ದಯವಿಟ್ಟು ಕೇಳಬೇಡ. ಆ ಪ್ರಶ್ನೆಯನ್ನು ವರವಾಗಿ ಕೇಳಬೇಡ.

*(ನಚಿಕೇತನ ಮನಸ್ಸು ಸ್ವಲ್ಪಹೊತ್ತು ಚಂಚಲವಾಗುವುದು. ಮನಸ್ಸು ಆಸೆಗಳಿಂದ ತುಂಬಿ ಹೋಗುವುದು. ಇದನ್ನು ಮುಖಭಾವದಿಂದ ತೋರಿಸುವನು. ಸ್ವಲ್ಪಹೊತ್ತಿನ ನಂತರ ಸುಧಾರಿಸಿಕೊಳ್ಳುವನು. ಮುಖವು ಗಂಭೀರವಾಗುವುದು. ಸ್ವಲ್ಪ ಕೋಪವೂ ಬರುವುದು. ನಿಶ್ಚಯಭಾವ ಮೂಡುವುದು. ಇವೆಲ್ಲವನ್ನೂ ಮುಖಭಾವದಿಂದಲೇ ತೋರಿಸುವನು.)*

**ನಚಿಕೇತ:** ಯಮರಾಜ, ನೀನು ಎಲ್ಲವನ್ನೂ ಅಂತ್ಯಗೊಳಿಸುವವನು. ಅದಕ್ಕೆಂದೇ ನಿನಗೆ ಅಂತಕ ಎಂದು ಹೆಸರು. ಈಗ ಯಾವ ಭೋಗಗಳನ್ನು ಕೊಡುತ್ತೇನೆ ಎಂದು ಹೇಳುತ್ತಿದ್ದೀಯಲ್ಲ, ಅದೆಲ್ಲವನ್ನೂ ನೀನೇ ಅಂತ್ಯಗೊಳಿಸಿ ಬಿಡುವೆ. ಮನುಷ್ಯನ ಸಾವು ಎನ್ನುವುದು ಎಲ್ಲವನ್ನೂ ಅಂತ್ಯಗೊಳಿಸುವುದು. ಇವತ್ತು ನಾವು ಅನುಭವಿಸುತ್ತಿರುವ ಭೋಗಗಳು ನಾಳೆ ಇರುತ್ತವೆಯೋ ಎನ್ನುವುದೇ ಅನುಮಾನ. ಇದಲ್ಲದೆ, ನೀನು ನನಗೆ ಕೊಡಮಾಡುತ್ತಿರುವ ಭೋಗಗಳು ಮನುಷ್ಯನ ಇಂದ್ರಿಯಗಳ ತೇಜಸ್ಸನ್ನು ಕಳೆದುಬಿಡುತ್ತವೆ. ಮನುಷ್ಯನು ದೇಹ-ಮನಸ್ಸುಗಳನ್ನು ಹಾಳು ಮಾಡಿಕೊಳ್ಳುತ್ತಾನೆ. ತನ್ನ ಆಯುಸ್ಸನ್ನೂ ನಷ್ಟ ಮಾಡಿಕೊಳ್ಳುತ್ತಾನೆ. ಅಯ್ಯಾ ಮೃತ್ಯು ದೇವತೆಯೇ, ನೀನು ಎಷ್ಟು ವರ್ಷಗಳ ಕಾಲ ಆಯುಸ್ಸು ನೀಡಿದರೂ, ಅದು ಅಲ್ಪವೇ ಅಲ್ಲವೆ? ಬ್ರಹ್ಮನ ಆಯುಸ್ಸೇ ಅಲ್ಪವೆಂದ ಮೇಲೆ, ಇನ್ನು ನಮ್ಮಗಳ ಆಯುಸ್ಸಿನ ಬಗ್ಗೆ ಹೇಳುವುದೇನಿದೆ? ಆದ್ದರಿಂದ, ನೀನು ನನಗೆ ಕೊಡುತ್ತೇನೆ ಎಂದು ಹೇಳುತ್ತಿರುವ ರಥಗಳೂ, ನೃತ್ಯಗೀತೆಗಳೂ ನಿನಗೇ ಇರಲಪ್ಪಾ, ನನಗೆ ಅವು ಬೇಡವೇ ಬೇಡ.

**ಯಮರಾಜ :** ಮಗೂ, ನಚಿಕೇತ, ಇದೇನು ಹೇಳುತ್ತಿರುವೆ? ನೀನಿನ್ನೂ ಚಿಕ್ಕ ಹುಡುಗ. ನಿನಗೆ ಆಸೆಗಳು ಯಾವುವೂ ಇಲ್ಲವೇನು? ಎಷ್ಟು ಹಣ ಬೇಕು ನಿನಗೆ? ಎಲ್ಲವನ್ನೂ ನಿನಗೆ ಕೊಡುತ್ತೇನೆ.

**ನಚಿಕೇತ:** ಯಮರಾಜ, ನೀನು ಜ್ಞಾನಿ. ಮಹಾಮೇಧಾವಿ. ನಿನಗೆ ಗೊತ್ತೇ ಇದೆ. ಮನುಷ್ಯ ಕೇವಲ ಧನದಿಂದ ತೃಪ್ತಿಹೊಂದುವವನಲ್ಲ. ಎಷ್ಟು ಹಣವಿದ್ದರೂ ಅವನಿಗೆ ತೃಪ್ತಿ ಬರುವುದೇ ಇಲ್ಲ. ಪ್ರಭೂ, ಮೃತ್ಯುದೇವತೆಯೇ, ನಿನ್ನ ದರ್ಶನವನ್ನು ನಾನು ಪಡೆದುಕೊಂಡಿದ್ದೇನೆ. ನನಗೆ ಹಣದ ಅಭಾವ ಎಂದಾದರೂ ಇರುತ್ತದೆಯೇನು? ನಿನ್ನಂಥ ಮಹಾತ್ಮನ ಬಳಿಗೆ ಬಂದು ಅದನ್ನು ಕೇಳುವುದೇನಿದೆಯಪ್ಪಾ. ಇನ್ನು ಆಯುಸ್ಸಿನ ಬಗ್ಗೆ. ನೀನು ಇಚ್ಛಿಸುವ ತನಕ ನಾವೆಲ್ಲ ಜೀವಿಸಿಯೇ ಇರುತ್ತೇವೆ. ಇದರಲ್ಲಿ ನೀನು ಕೊಡುವುದಾದರೂ ಏನಿದೆ, ಹೇಳು. ನಿನ್ನನ್ನು ನಾನು ಸಂಧಿಸಿದ್ದೇನೆ. ನಿನ್ನ ಆಶೀರ್ವಾದವನ್ನು ಪಡೆದುಕೊಂಡಿದ್ದೇನೆ. ಇಂಥ ನನಗೆ ಅಲ್ಪಾಯುಸ್ಸಾಗಲಿ, ಅಲ್ಪಧನವಾಗಲಿ ಹೇಗೆ ತಾನೆ ಉಂಟಾಗಲು ಸಾಧ್ಯ, ಹೇಳು.

**ಯಮರಾಜ :** ಮಗೂ ನಿನಗಿನ್ನೂ ಚಿಕ್ಕ ವಯಸ್ಸು. ನೀನಿನ್ನೂ ತಿಳಿದುಕೊಳ್ಳುವುದು, ಅನುಭವಿಸುವುದೂ ಬಹಳ ಇದೆ.

**ನಚಿಕೇತ:** ಪ್ರಭೂ, ನಾನು ಚೆನ್ನಾಗಿ ಯೋಚಿಸಿದ್ದೇನೆ. ಅಮರರಾದ ದೇವತೆಗಳ ಬಳಿ ಬಂದು, ನಾನು ಬರೀ ಧನಕನಕಗಳನ್ನು ಕೇಳಲು ಸಾಧ್ಯವೇನು? ಈ ನಶ್ವರವಾದ ಭೋಗವಸ್ತುಗಳಿಗಿಂತ ಉತ್ತಮವಾದ ಪ್ರಯೋಜನವನ್ನು ನಿನ್ನಿಂದ ಪಡೆದುಕೊಳ್ಳಬಹುದು ಎಂಬುದನ್ನು ನಾನು ಚೆನ್ನಾಗಿಯೇ ಅರಿತಿದ್ದೇನೆ. ಈ ಭೂಮಿಯಲ್ಲಿ ವಾಸಮಾಡುತ್ತಿರುವ ಒಬ್ಬ ವಿವೇಕಿಯಾದ ಮನುಷ್ಯ ತಾನು ಸಾಯುತ್ತೇನೆ ಎಂದು ತಿಳಿದೂ ತಿಳಿದೂ, ನೀನು ಕೊಡುವ ಅಪ್ಸರಸ್ತ್ರೀಯರ ಸಹವಾಸ, ಅವರೊಡನೆ ಗಾನನೃತ್ಯಗಳಲ್ಲಿ ಕಾಲವನ್ನು ಕಳೆಯುವನೇನು? ಇದೆಂಥ ಹುಚ್ಚುತನ! ಪ್ರಭೂ, ನನ್ನನ್ನು ಮತ್ತೆ ಮತ್ತೆ ಪ್ರಲೋಭನೆಗೆ ಒಳಪಡಿಸಬೇಡ. ಅನಿತ್ಯವಾದ ಕಾಮಗಳ ಆಸೆಯನ್ನು ನನಗೆ ತೋರಿಸಬೇಡ. ಯಾವ ವಿಷಯದಲ್ಲಿ ದೇವತೆಗಳೂ ಸಂಶಯಗ್ರಸ್ತರಾಗಿ ಇದ್ದಾರೆಯೋ, ಆ ಪರಲೋಕದ ವಿಷಯವನ್ನೇ, ಆತ್ಮಜ್ಞಾನವನ್ನೇ ನಾನು ಮೂರನೆಯ ವರವಾಗಿ ಕೇಳುತ್ತಿದ್ದೇನೆ. ಇದನ್ನು ಬಿಟ್ಟು ಈ ನಚಿಕೇತನಿಗೆ ಏನೂ ಬೇಕಾಗಿಲ್ಲ. ಈ ಗಹನವಾದ, ಗೂಢವಾದ ತತ್ತ್ವವನ್ನು ಬಿಟ್ಟು ಈ ನಚಿಕೇತನು ಬೇರೆ ಏನನ್ನೂ ಕೇಳಲಾರನು. ಕೊಟ್ಟಮಾತಿನಂತೆ ಕೊಟ್ಟರೆ ಕೊಡು, ಇಲ್ಲದಿದ್ದರೆ ಬಿಡು.

*(ಯಮನ ಮನಸ್ಸಿನಲ್ಲಿ ಸಂತೋಷ ಉಕ್ಕಿ ಬರುವುದು. ಅದು ಅವನ ಮುಖದಲ್ಲಿ ವ್ಯಕ್ತವಾಗುವುದು. ಅವನು ಸಂತೋಷದಿಂದ ನಚಿಕೇತನನ್ನು ಬಾಚಿ ತಬ್ಬಿಕೊಳ್ಳುವನು. ಅವನ ಮೈದಡವುತ್ತ ಹೇಳುವನು.)*

**ಯಮ :** ಮಗು, ಜೀವನದಲ್ಲಿ ಎರಡು ರೀತಿಯ ಗುರಿಗಳಿವೆ. ಒಂದು ಶ್ರೇಯಸ್ಸು ಅಂದರೆ ಮುಕ್ತಿ. ಇನ್ನೊಂದು ಪ್ರೇಯಸ್ಸು ಅಂದರೆ ಪ್ರಾಪಂಚಿಕ ಸುಖಭೋಗಗಳು. ಇವುಗಳಿಂದ ಪ್ರತಿಯೊಬ್ಬನೂ ಪ್ರೇರಿತನಾಗುತ್ತಾನೆ. ಇವುಗಳಲ್ಲಿ ಒಂದನ್ನು ಅವನು ಆಯ್ಕೆ ಮಾಡಿಕೊಳ್ಳಬೇಕಾಗುತ್ತದೆ. ಮಗೂ, ಜಗತ್ತಿನಲ್ಲಿ ಬಹುತೇಕ ಎಲ್ಲರೂ ಆಯ್ಕೆ ಮಾಡಿಕೊಳ್ಳುವುದು ಪ್ರೇಯಸ್ಸಿನ ದಾರಿಯನ್ನೇ. ಹೀಗೆಂದೇ ಅವರು ಜನನ-ಮರಣಗಳ ಸಂಸಾರ ಚಕ್ರದಲ್ಲಿ ಬಿದ್ದು ನರಳುತ್ತಾರೆ. ಆದರೆ, ನಚಿಕೇತ, ನಿನ್ನ ಶ್ರದ್ಧೆ, ತ್ಯಾಗ, ಪ್ರಲೋಭನೆಗಳಿಗೆ ತುತ್ತಾಗದ ನಿಶ್ಚಯಬುದ್ಧಿ — ಇವುಗಳನ್ನು ನಾನು ಖಂಡಿತ ಪ್ರಶಂಸಿಸಲೇಬೇಕು. ನೀನು ಅನಿತ್ಯವಾದ ಪ್ರೇಯಸ್ಸನ್ನು ಬಿಟ್ಟು ನಿತ್ಯವಾದ ಮೋಕ್ಷರೂಪದ ಶ್ರೇಯಸ್ಸನ್ನೇ ಆರಿಸಿದ್ದೀಯೆ. ಇತರ ಜನರಿಗೆ ಪ್ರಿಯವಾದ ಎಲ್ಲ ಕಾಮಗಳನ್ನು ಅನಾಯಾಸವಾಗಿ ಪಡೆದುಕೊಳ್ಳುವ ಅವಕಾಶ ನಿನಗೆ ಸಿಕ್ಕಿದ್ದರೂ, ಅದನ್ನು ತ್ಯಾಗ ಮಾಡಿದ್ದೀಯೆ. ಮೂಢ ಜನರು ಹೆಚ್ಚು ಹೆಚ್ಚು ಹಣವನ್ನು ಸಂಪಾದಿಸಲು ಹೋಗಿ, ಸಂಸಾರದ ಸಂಕೋಲೆಯಲ್ಲಿ ಬಿದ್ದು ನರಳಾಡುತ್ತಾರೆ. ಹಾಗೆ ನೀನು ಮಾಡಲಿಲ್ಲ. ಧನ್ಯ ನೀನು ನಚಿಕೇತ, ಧನ್ಯ! ಮಗೂ, ಈಗ ನಾನು ನೀನು ಕೇಳಿದ ವಿಷಯದ ಬಗ್ಗೆ ಉಪದೇಶ ಮಾಡುತ್ತೇನೆ. ಶ್ರದ್ಧೆಯಿಂದ ಕೇಳು, ಆಯಿತೆ?

*(ಕತ್ತಲೆ ಕವಿಯುವುದು. ಕೆಂಪು ಬಣ್ಣದ ಬೆಳಕು ಆವರಿಸುವುದು. ಯಮಧರ್ಮರಾಯನು ಪೀಠದಲ್ಲಿ ಕುಳಿತಿದ್ದಾನೆ. ನಚಿಕೇತ ನೆಲದ ಮೇಲೆ ಕೈಮುಗಿದುಕೊಂಡು ನಿಂತಿದ್ದಾನೆ. ಓಂಕಾರನಾದ ಹಿನ್ನೆಲೆಯಲ್ಲಿ ಕೇಳಿಬರುತ್ತಿದೆ.)*

*(ಮುಂದುವರಿಯುವುದು)*



# ಕೃಪೆ ತಂದ ವಿಜಯ



ಕಥೆ : ಸ್ವಾಮಿ ವಿಮೂರ್ತಾನಂದ

ಚಿತ್ರ : ಪದ್ಮವಾಸನ್

**1** ಶ್ರೀರಾಮಕೃಷ್ಣರು ಆಗ ದಕ್ಷಿಣೇಶ್ವರದಲ್ಲಿ ವಾಸವಾಗಿದ್ದರು. ಒಂದು ದಿನ ಮಥುರ ಬಾಬುವಿನ ಅರಮನೆಯಲ್ಲಿ ...




**2** ಹನುಮಾನ್ ಸಿಂಗ್ ದೇವಾಲಯದ ಬಾಗಿಲು ಕಾಯುತ್ತ, ಕುಸ್ತಿ ಸ್ಪರ್ಧೆಗಳಿಗೆ ಅಭ್ಯಾಸ ಮಾಡುತ್ತ ಕಠಿಣ ಶ್ರಮ ಪಡುತ್ತಿದ್ದ. ಬಿಡುವು ದೊರೆತಾಗಲೆಲ್ಲ ಅವನು ಹನುಮಂತನ ಮುಂದೆ ಪ್ರಾರ್ಥಿಸುತ್ತಿದ್ದ. ಬೆಳಗ್ಗೆ ಬೇಗನೆ ಎದ್ದು, ಅಭ್ಯಾಸ ಮಾಡಿದ ಬಳಿಕ ಹನುಮಂತನ ಧ್ಯಾನ ಮಾಡುತ್ತಿದ್ದ.




**3** ಶ್ರೀರಾಮಕೃಷ್ಣರನ್ನು ಭೇಟಿಯಾಗಲು ಬಹಳ ಮಂದಿ ದಕ್ಷಿಣೇಶ್ವರಕ್ಕೆ ಬರುತ್ತಿದ್ದರು. ಇದನ್ನು ನೋಡಿ...



**4**

ದೇವಾಲಯದ ಇತರ ಕೆಲಸಗಾರರಂತಲ್ಲದೆ, ಹನುಮಾನ್ ಸಿಂಗ್ ಶ್ರೀರಾಮಕೃಷ್ಣರ ಬಳಿಗೆ ಹೋಗಿ, ಅವರ ಅಮೃತದಂತಹ ಉಪದೇಶಗಳನ್ನು ಕೇಳುತ್ತಿದ್ದನು. ಒಂದು ದಿನ...




**5**

ಹನುಮಾನ್ ಸಿಂಗ್ ಅತ್ಯುತ್ತಮ ಕುಸ್ತಿಪಟುವೆಂದು ಎಲ್ಲೆಡೆ ಹೆಸರುವಾಸಿಯಾದ. ಇದನ್ನು ತಿಳಿದು, ರತನ್ ಎಂಬ ಇನ್ನೊಬ್ಬ ಕುಸ್ತಿಪಟು ದಕ್ಷಿಣೇಶ್ವರಕ್ಕೆ ಬಂದ.




**6**

ಮರುದಿನ ರತನ್ ದೇವಾಲಯಕ್ಕೆ ಬಂದ. ಹನುಮಾನ್ ಸಿಂಗ್‌ನನ್ನು ಭೇಟಿಯಾದ.




**7**

ಅಂದಿನಿಂದ ರತನ್ ಭಾರೀಪ್ರಮಾಣದ ಆಹಾರ ಸೇವನೆ ಮಾಡಿದ; ಹಲವು ಗಂಟೆಗಳ ಕಾಲ ಅಭ್ಯಾಸ ಮಾಡಿದ. ಅವನು ಅಭ್ಯಾಸ ಮಾಡುವುದನ್ನು ಊರಿಗೆ ಊರೇ ನೋಡಿತು.



**8**

ಆದರೆ ಹನುಮಾನ್ ಸಿಂಗ್ ಶಾಂತನೂ, ಭಕ್ತಿಪರನೂ ಆಗಿದ್ದನು. ಎಲ್ಲ ಭಾರವನ್ನೂ ದೇವರ ಮೇಲೆ ಹಾಕಿದ್ದನು. ಇಡೀ ದಿನ ಉಪವಾಸ ಮಾಡಿ, ಸಾಯಂಕಾಲ ಸ್ವಲ್ಪ ಪ್ರಸಾದವನ್ನಷ್ಟೇ ತಿನ್ನುತ್ತಿದ್ದ. ತುಳಸೀವನದಲ್ಲಿ ಕುಳಿತು ಹನುಮಂತ ದೇವರ ಧ್ಯಾನ ಮಾಡುತ್ತ ಅವನು ಹೆಚ್ಚಿನ ಸಮಯ ಕಳೆಯುತ್ತಿದ್ದ.




**9** ದೇವಾಲಯದ ಇತರ ಕೆಲಸಗಾರರು ಈ ಕುಸ್ತಿಪಟುಗಳ ಬಗ್ಗೆ ಮಾತನಾಡಿಕೊಳ್ಳುತ್ತಿದ್ದರು...




**10** ಈ ವಾರ್ತೆ ಶ್ರೀರಾಮಕೃಷ್ಣರನ್ನು ತಲುಪಿತು. ದೇವರನ್ನು ಪ್ರಾಮಾಣಿಕವಾಗಿಯೂ ಪ್ರಾರ್ಥಿಸುತ್ತಿದ್ದವರ ಬಳಿಗೆ ಹೋಗಿ ಭೇಟಿ ಮಾಡಿ ಬರುತ್ತಿದ್ದರು ಶ್ರೀರಾಮಕೃಷ್ಣರು. ಅಂತೆಯೇ ಅವರು ಹನುಮಾನ್ ಸಿಂಗ್ ಬಳಿಗೆ ಹೋದರು.

**11**

ಹನುಮಂತನ ದರ್ಶನವನ್ನು ಪಡೆಯಲು ಶ್ರೀರಾಮಕೃಷ್ಣರು ಸಾಕಷ್ಟು ತಪಸ್ಸು ಮಾಡಿದ್ದರು. ಅದರ ಫಲವಾಗಿ ಅವರಿಗೆ ಹನುಮಂತನಿಗೆ ಇರುವಂತೆ ಒಂದು ಸಣ್ಣ ಬಾಲ ಕೂಡ ಬೆಳೆದಿತ್ತು! ಹನುಮಾನ್ ಸಿಂಗ್‌ನಿಗೆ ಈ ವಿಷಯ ಗೊತ್ತಿತ್ತು. ಹೀಗಾಗಿ ಶ್ರೀರಾಮಕೃಷ್ಣರನ್ನು ಕಂಡು ಅವನಿಗೆ ಉತ್ಸಾಹ ಉಕ್ಕಿ ಬಂತು.



**12** ಶ್ರೀರಾಮಕೃಷ್ಣರು ಹನುಮಾನ್ ಸಿಂಗ್‌ನೊಂದಿಗೆ ಸ್ವಲ್ಪ ಹೊತ್ತು ಮಾತನಾಡಿದರು...




**13** ಕೂಡಲೇ ಹನುಮಾನ್ ಸಿಂಗ್ ಶ್ರೀರಾಮಕೃಷ್ಣರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ...




ಶ್ರೀರಾಮಕೃಷ್ಣರು ನಸುನಗುತ್ತ ಅವನನ್ನು ಆಶೀರ್ವದಿಸಿದರು. ಹನುಮಾನ್ ಸಿಂಗ್‌ನಿಗೆ ತುಂಬಾ ಆನಂದವುಂಟಾಯಿತು.

**14** ಅಂದು ಶನಿವಾರ. ಕಾಳಗವನ್ನು ನೋಡಲು ತುಂಬಾ ಮಂದಿ ನೆರೆದಿದ್ದರು. ಮಥುರ ಬಾಬುವೇ ಅವರ ತೀರ್ಪುದಾರ. ಹನುಮಾನ್ ಸಿಂಗ್ ಸೋಲುತ್ತಾನೆ ಎಂದೇ ಎಲ್ಲರೂ ಭಾವಿಸಿದ್ದರು. ಆದರೆ ಆಧ್ಯಾತ್ಮಿಕ ಶಕ್ತಿಯ ಮುಂದೆ ದೈಹಿಕ ಶಕ್ತಿ ಹೇಗೆ ಗೆಲ್ಲುವುದು? ರತನ್ ಸೋತುಹೋದ... ಜೈ ಶ್ರೀರಾಮ್ !






ಓ ಹನುಮಾನ್ ! ನಿನ್ನಲ್ಲಿ ಶರಣಾದವರಿಗೆ ಜೀವನದ ಎಲ್ಲ ಸಂಪತ್ತುಗಳೂ ಲಭಿಸುವವು. ನೀನು ರಕ್ಷಿಸುತ್ತಿರುವಾಗ ಇನ್ನು ಹೆದರುವುದೇಕೆ?

*— ಹನುಮಾನ್ ಚಾಲೀಸಾ*

# ಮೈಸೂರು ಆಶ್ರಮದಲ್ಲಿ ಇತ್ತೀಚೆಗೆ ನಡೆದ ಕಾರ್ಯಕ್ರಮಗಳು







**‘ವಿವೇಕ ಶಿಕ್ಷಣ’ದ ವಾರ್ಷಿಕೋತ್ಸವ :** ಮೈಸೂರು ಶ್ರೀರಾಮಕೃಷ್ಣ ಆಶ್ರಮವು ಕಳೆದ ೧೯ ವರ್ಷಗಳಿಂದ ನಡೆಸಿಕೊಂಡು ಬರುತ್ತಿರುವ, ಆರ್ಥಿಕ ಹಾಗೂ ಶೈಕ್ಷಣಿಕವಾಗಿ ಹಿಂದುಳಿದ ಮಕ್ಕಳಿಗಾಗಿ ವಿಶೇಷ ನೆರವಿನ ಉಚಿತ ಶಿಕ್ಷಣ ಕಾರ್ಯಕ್ರಮ **‘ವಿವೇಕ ಶಿಕ್ಷಣ’**ದ ವಾರ್ಷಿಕೋತ್ಸವವು ೨೦೧೯ರ ಜನವರಿ ೫ ರಂದು ನೆರವೇರಿತು. ಮುಖ್ಯ ಅತಿಥಿಗಳಾಗಿ ಮೈಸೂರು ಎರಿಸ್‌ಗ್ಲೋಬಲ್ ಸಂಸ್ಥೆಯ ಶ್ರೀ ಕೆ.ಜಿ. ರಾಘವೇಂದ್ರ ಅವರು ಭಾಗವಹಿಸಿ ಮಾತನಾಡಿದರು. ಮೈಸೂರು ಆಶ್ರಮದ ಅಧ್ಯಕ್ಷರಾದ ಸ್ವಾಮಿ ಆತ್ಮಜ್ಞಾನಂದಜಿ ಆಶೀರ್ವಚನ ನೀಡಿದರು. ‘ವಿವೇಕ ಶಿಕ್ಷಣ’ದ ಸಂಚಾಲಕರಾದ ಸ್ವಾಮಿ ಸರ್ವಜಯಾನಂದಜಿ ಉಪಸ್ಥಿತರಿದ್ದರು. ಕೊನೆಯದಾಗಿ ‘ವಿವೇಕ ಶಿಕ್ಷಣ’ದ ವಿದ್ಯಾರ್ಥಿಗಳಿಂದ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. ಇಡೀ ಕಾರ್ಯಕ್ರಮವನ್ನು ವಿದ್ಯಾರ್ಥಿಗಳೇ ಅಚ್ಚುಕಟ್ಟಾಗಿ ನಿರೂಪಿಸಿದ್ದು ವಿಶೇಷವಾಗಿ ಗಮನ ಸೆಳೆಯಿತು.



**ರಾಷ್ಟ್ರೀಯ ಯುವ ದಿನಾಚರಣೆ :** ಜನವರಿ ೧೨ರಂದು ಸ್ವಾಮಿ ವಿವೇಕಾನಂದರ ಜನ್ಮದಿನ ಪ್ರಯುಕ್ತ **‘ರಾಷ್ಟ್ರೀಯ ಯುವ ದಿನಾಚರಣೆ’**ಯನ್ನು ಮೈಸೂರು ಶ್ರೀರಾಮಕೃಷ್ಣ ಆಶ್ರಮವು ಮೆರವಣಿಗೆಯೊಂದಿಗೆ ಆಚರಿಸಿತು. ನಗರದ ೧೨ ಶಾಲೆ, ಕಾಲೇಜುಗಳಿಂದ ಬಂದ ಸುಮಾರು ೧೩೦೦ ಮಂದಿ ವಿದ್ಯಾರ್ಥಿ, ವಿದ್ಯಾರ್ಥಿನಿಯರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಸ್ವಾಮೀಜಿ ಭಾವಚಿತ್ರಕ್ಕೆ ಆಶ್ರಮದ ಸ್ವಾಮೀಜಿಗಳು, ಭಕ್ತರು, ಅಧ್ಯಾಪಕರು ಹಾಗೂ ವಿದ್ಯಾರ್ಥಿಗಳು ಮಾಲಾರ್ಪಣೆ ಹಾಗೂ ಪುಷ್ಪಾರ್ಚನೆ ಮಾಡಿದ ಬಳಿಕ ಮೆರವಣಿಗೆ ಆರಂಭಗೊಂಡಿತು. ವಿದ್ಯಾರ್ಥಿಗಳು ವಾದ್ಯಘೋಷ, ಸ್ವಾಮೀಜಿ ಸಂದೇಶದ ಫಲಕಗಳೊಂದಿಗೆ ೩ ಕಿ.ಮೀ. ದೂರ ನಡೆದು, ಶ್ರೀರಾಮಕೃಷ್ಣ ವಿದ್ಯಾಶಾಲೆಯಲ್ಲಿ ಆಯೋಜಿಸಿದ ಸಭಾಕಾರ್ಯಕ್ರಮಕ್ಕೆ ಬಂದು ಸೇರಿದರು. ಎಲ್ಲರಿಗೂ ಪಾನೀಯ ಹಾಗೂ ಪ್ರಸಾದ ನೀಡಲಾಯಿತು.



**ವಿವೇಕ ಸಿಂಚನ :** ಯುವಕರಿಗಾಗಿ ಮೂರು ದಿನಗಳ ಆವಾಸಿ ಶಿಬಿರವು ಜನವರಿ ೧೮ರಿಂದ ೨೦ರ ವರೆಗೆ ಮೈಸೂರು ಆಶ್ರಮದ ಅಂಗಸಂಸ್ಥೆಯಾದ RIMSE ಯಲ್ಲಿ ನಡೆಯಿತು. ಇದರಲ್ಲಿ ಕರ್ನಾಟಕದ ವಿವಿಧ ಪ್ರದೇಶಗಳಿಂದ ಬಂದ ೧೮ರಿಂದ ೨೮ರ ವರೆಗಿನ ವಯೋಮಿತಿಯ ೧೧೦ ಮಂದಿ ಯುವಕರು ಭಾಗವಹಿಸಿದ್ದರು. ಶ್ರೀರಾಮಕೃಷ್ಣ, ಶ್ರೀಮಾತೆ ಶಾರದಾದೇವಿ, ಸ್ವಾಮಿ ವಿವೇಕಾನಂದರನ್ನು ಕುರಿತಂತೆ ಹಾಗೂ ರಾಮಕೃಷ್ಣ ಮಹಾಸಂಘದ ಧ್ಯೇಯಾದರ್ಶ, ಸಂನ್ಯಾಸಿ ಜೀವನದ ಆದರ್ಶ ಮುಂತಾದ ವಿಷಯಗಳನ್ನು ಕುರಿತಂತೆ ರಾಮಕೃಷ್ಣ ಮಹಾಸಂಘದ ಸಂನ್ಯಾಸಿಗಳು ಪ್ರವಚನ ನೀಡಿದರು. ಶಿಬಿರಾರ್ಥಿಗಳಿಗೆ ಆಧ್ಯಾತ್ಮಿಕ ಗ್ರಂಥಗಳನ್ನು ನೀಡಲಾಯಿತು.

**ಶಾರದಾ ಜ್ಞಾನಸುಧಾ :** ಸ್ವಾಮಿ ವಿವೇಕಾನಂದರ ಚಿಕಾಗೋ ಉಪನ್ಯಾಸಗಳ ೧೨೫ನೇ ವಾರ್ಷಿಕೋತ್ಸವದ ಆಚರಣೆಯ ಅಂಗವಾಗಿ ಆಶ್ರಮವು ಲಿಖಿತ ರಸಪ್ರಶ್ನೆ ಕಾರ್ಯಕ್ರಮ **‘ಶಾರದಾ ಜ್ಞಾನಸುಧಾ’** ವನ್ನು ಆಚರಿಸಿತು. ‘ಚಿಕಾಗೋದಲ್ಲಿ ವಿಜಯ ಪತಾಕೆ’ ಎಂಬ ಪುಸ್ತಕವನ್ನು ಆಧರಿಸಿ ನಡೆಸಿದ ಈ ರಸಪ್ರಶ್ನೆಯಲ್ಲಿ ೪೫೨ ಶಾಲೆಗಳ ೪೪,೨೧೬ ವಿದ್ಯಾರ್ಥಿಗಳು ಭಾಗವಹಿಸಿದ್ದರು. ೨೦೧೮ರ ಡಿಸೆಂಬರ್ ೩೧ರಂದು ನಡೆದ ಕಾರ್ಯಕ್ರಮದಲ್ಲಿ ಪ್ರಶಸ್ತಿ ವಿತರಣೆ ಮಾಡಲಾಯಿತು. ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ ವಿದ್ಯಾರ್ಥಿಗಳು ಸ್ವಾಮಿ ವಿವೇಕಾನಂದರ ಪುಸ್ತಕವನ್ನು ಓದಿ, ಪ್ರಶ್ನೆಗಳಿಗೆ ಉತ್ತರ ಬರೆದು ರಸಪ್ರಶ್ನೆಯಲ್ಲಿ ಭಾಗವಹಿಸಿದ್ದರು. ಈ ಮೂಲಕ ಸ್ವಾಮೀಜಿ ಸಂದೇಶಗಳು ಇನ್ನಷ್ಟು ವ್ಯಾಪಕವಾಗಿ ಹರಡುವುದು ಸಾಧ್ಯವಾಯಿತು.



Managing Editor : Swami Atmajnanananda Editor : Swami Jnanayogananda
Printed and Published by Swami Atmajnanananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಆರ್ಕಿಡ್ ಟ್ರಾವೆಲ್ & ಟೂರ್ಸ್

Orchid
Travel & Tours

**www.orchidtours.net**

## ರಿಯಾಯಿತಿ ದರದಲ್ಲಿ ವಿದೇಶಿಪ್ರವಾಸ



### 7 ದಿನಗಳ ಜಪಾನ್ ಪ್ರವಾಸ

ಹೈ ಸ್ಪೀಡ್ ಬುಲೆಟ್ ರೈಲಿನಲ್ಲಿ ಪ್ರಯಾಣದ ಅನುಭವ ಹಾಗೂ ಜಪಾನ್ ರಾಜಧಾನಿ ಟೋಕಿಯೋ
ಪ್ರವಾಸ ಸ್ಥಳ : ಒಸಾಕಾ, ಹಿರೋಷಿಮಾ, ಕ್ಯೋಟೋ, ಮೌಂಟ್‌ಫುಜಿ ನಾರ ನಗರ ವೀಕ್ಷಣೆ ಹಾಗೂ ಇತರೆ



### 6 ದಿನಗಳ ಶ್ರೀಲಂಕಾ ಪ್ರವಾಸ ರಾಮಾಯಣ ಕಾಲದ ಸ್ಥಳ ವೀಕ್ಷಣೆ

ಕೊಲೊಂಬೊ, ನೆಗೆಂಬೊ, ಕ್ಯಾಂಡಿ, ಡಾಂಬುಲಾ, ಸೀತಾ ಅಶೋಕವನ, ಹನುಮಾನ್ ದೇವಸ್ಥಾನ
ಹಾಗೂ ಶ್ರೀಲಂಕಾ ಸಾಂಸ್ಕೃತಿಕ ಕಾರ್ಯಕ್ರಮಗಳು



### 15 ಮತ್ತು 18 ದಿನಗಳ ಗ್ರ್ಯಾಂಡ್ ಯು.ಕೆ.–ಯುರೋಪ್ ಪ್ರವಾಸ

ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್, ಆಸ್ಟ್ರೀಯಾ,
ಲಿಚೆನ್‌ಟೆನ್‌ಸ್ಟೈನ್, ಇಟಲಿ, ವ್ಯಾಟಿಕನ್



### 18 ಮತ್ತು 12 ದಿನಗಳ ಅಮೇರಿಕಾ ಪ್ರವಾಸ

ಪ್ರವಾಸ ಸ್ಥಳ : ನ್ಯೂಯಾರ್ಕ್, ವಾಷಿಂಗ್ಟನ್, ನಯಾಗರ ಫಾಲ್ಸ್, ಲಾಸ್‌ವೆಗಾಸ್,
ಲಾಸ್ ಎಂಜಲೀಸ್, ಸ್ಯಾನ್‌ಫ್ರಾನ್ಸಿಸ್‌ಕೋ



### 11 ದಿನಗಳ ಸಿಂಗಾಪುರ–ಮಲೇಶಿಯ–ಥೈಲ್ಯಾಂಡ್ ಪ್ರವಾಸ

**ಸಿಂಗಾಪುರ** : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್ ಜೊತೆಗೆ ಸಿ ಅಕ್ವೇರಿಯಂ, ವಿಂಗ್ಸ್ ಆಫ್ ಟೈಮ್,
ಜುರೋಂಗ್ ಬರ್ಡ್‌ಪಾರ್ಕ್, ಯುನಿವರ್ಸಲ್ ಸ್ಟುಡಿಯೋ,

**ಮಲೇಶಿಯ** : ಕೌಲಾಲಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ, ಜಂಟಿಂಗ್ ಹೈಲ್ಯಾಂಡ್, ಕೆ.ಎಲ್. ಟವರ್

**ಥೈಲ್ಯಾಂಡ್** : ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್,
ಮರೀನಾ ಪಾರ್ಕ್, ವಾಕರ್ ಸ್ಟ್ರೀಟ್



### 8 ದಿನಗಳ ಶ್ರೀ ಮುಕ್ತಿನಾಥ ಯಾತ್ರೆ (ಸಾಲಿಗ್ರಾಮಂ) ಬೆಂಗಳೂರಿನಿಂದ ವಿಮಾನದಲ್ಲಿ

ಪ್ರವಾಸ ಸ್ಥಳಗಳು : ಶ್ರೀ ಮುಕ್ತಿನಾಥ ದೇವಸ್ಥಾನ, ಪಶುಪತಿನಾಥ ದೇವಸ್ಥಾನ,
ಜಲನಾರಾಯಣ ದೇವಸ್ಥಾನ, ಶ್ರೀ ಕೃಷ್ಣ ದೇವಸ್ಥಾನ, ಕಠ್ಮಂಡು ಸಿಟಿ ಟೂರ್,
ಪೋಕ್ರಾ–ಬಿಂದಾಬಾಸಿನಿ ದೇವಸ್ಥಾನ, ತಾಲಭೈರವಿ ದೇವಸ್ಥಾನ, ದೋಣಿಯಲ್ಲಿ
ಪೋಕ್ರಾ ಲೇಕ್ ಒಂದು ವಿಹಾರ, ಮನೋಕಾಮನ ದೇವಸ್ಥಾನ (ಕೇಬಲ್ ಕಾರ್‌ನಲ್ಲಿ)




BASAVANAGUDI
#98, 1st Floor, DVG Road
Office 080-26621983, 26617178
**Mobile +91 9900080793 / 9880079588**

***For more details please Contact :***




MALLESHWARAM
# 198, 1st Floor, 11th Cross
Office 080 - 23445598, 23445559
**Mobile +91 9900080791 / 9880079644**

VIVEKA PRABHA (KANNADA MONTHLY)
March 2019, Vol.20, No.03, No.of pages: 44

Registered With Registrar of News Papers of India under 72356/2000.postal Regn.No.KA/SK/MYS/480/ 2018-20. LICENCED TO POST W.P.P. AT YADAVAGIRI MYSORE 570 020. VIDE LICENCE NO. SK/WPP/MYS.155/2018-20



Printed at mayur graphics,Bangalore